# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

ಪ್ರವೇಶಧನವಿಲ್ಲ



**ಬಹುಮಾನ ಗಳಿಸಿರಿ.**

ಕ್ಯಾಮಲ್—ಪ್ರಥಮ ಬಹುಮಾನ ರೂ. 15
ಕ್ಯಾಮಲ್—ದ್ವಿತೀಯ ಬಹುಮಾನ ರೂ. 10
ಕ್ಯಾಮಲ್—ತೃತೀಯ ಬಹುಮಾನ ರೂ. 5
ಕ್ಯಾಮಲ್—5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್—10 ಸರ್ಟಿಫಿಕೇಟ್‌ಗಳು

ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿ.




ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ
P.B. No. 9928, COLABA, Bombay-400 005.
ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name ______________________ Age ______________

Address ______________________________________

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟ್ಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.
ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಖು: *31-12-1979*

Vision

**CONTEST NO.12**

**Results of Chandamama—Camlin Colouring Contest No. 10 (Kannada)**

*1st Prize:* Gopal Umesh Hedge, Hegde, N.K. *2nd Prize:* Rajesh M. Bolar, Bombay-75. *3rd Prize:* S. N. Sinha, Mysore. *Consolation Prizes:* Lingojirao Mujumdar, Shorapur. Kum. Ramachandra, Dharwar-500 001; Kukiam Prabhakar, Bandra (East); Shashidhar Bijjal Naregal, Dharwad Dist., 882 119; Jyoti Gururaj Mirji, Nipani.



# ಚಂದಮಾಮ

## ಡಿಸೆಂಬರ್ 1979



## ಈ ಸಂಚಿಕೆಯಲ್ಲಿ








# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಪುಟ್ಟಮಕ್ಕಳ ಮಾತುಗಳನ್ನು ಅಲಕ್ಷ್ಯಮಾಡುವುದು ಒಳ್ಳೆಯುದಲ್ಲ. ಅವುಗಳ ಬಾಯಿಯಿಂದ ಕೆಲವುಬಾರಿ ದೊಡ್ಡ ಮಾತುಗಳು ಬರಬಹುದು. ಅಂಥವುಗಳನ್ನು ಒಮ್ಮೆಗೇ ತಾತ್ಸಾರ ಮಾಡದೆ, ತಕ್ಕ ಪ್ರತ್ಯುತ್ತರ ನೀಡಿ ಮಕ್ಕಳ ಮನೋವಿಕಾಸಕ್ಕೆ ದಾರಿಮಾಡಿ ಕೊಡಬೇಕು. ಇದಕ್ಕೆ ತಪ್ಪಿ ಮಗನನ್ನು ಶಪಿಸಿದ ತಂದೆ, ಕಡೆಗೆ ಮಗನಿಂದಲೇ ಬಂಧಮುಕ್ತನಾದ ವಿವರವನ್ನು ಈ ಸಂಚಿಕೆಯ ಪುರಾಣ ಬಾಲ "ಅಷ್ಟ್ಟಾವಕ್ರನು" ತೋರಿಸುತ್ತಾನೆ.

## ಅಮರವಾಣಿ

ಅತ್ಯಲ್ಪಮಪಿ ಸಾಧೂನಾಂ ಶಿಲಾ ಲೇಖೇವ ತಿಷ್ಠತಿ
ಜಲ ಲೇಖೇವ ನೀಚಾನಾಂ ಯತ್ ಕೃತಂತತ್ ವಿನಶ್ಯತಿ

ಸತ್ಪುರುಷರ ಕೃತಿಗಳು ಎಷ್ಟೋ ಸ್ವಲ್ಪವಾದರೂ ಶಿಲಾಕ್ಷರಗಳ ಹಾಗೆ ನಿಲ್ಲುತ್ತವೆ. ನೀಚರು ಮಾಡುವುದೆಲ್ಲಾ ನೀರಿನಲ್ಲಿ ಬರೆದ ಹಾಗೆ ಆಗಿಂದಾಗಲೇ ನಾಶವಾಗಿ ಹೋಗುತ್ತದೆ.

---

ಸಂಪುಟ : ೬೩ ಡಿಸೆಂಬರ್ '೭೯ ಸಂಚಿಕೆ : ೬

---





# ಪ್ರಶ್ನೋತ್ತರಗಳು

**ತ್ರಿಪುರಾರಿ ಸತ್ಯನಾರಾಯಣ, ಟೀಕಿ**

ಪ್ರ: ಹಾಲು ಶಾಕಾಹಾರವೋ? ಅಲ್ಲ, ಮಾಂಸಾಹಾರವೋ?

ಉ: ಆಹಾರಗಳನ್ನು ಸಸ್ಯ ಸಂಬಂಧವೆಂದೂ ಪ್ರಾಣಿ ಸಂಬಂಧವೆಂದೂ ವಿಭಜನೆ ಮಾಡಿದಾಗ ಹಾಲು ಪ್ರಾಣಿ ಸಂಬಂಧವೆನಿಸುತ್ತದೆ. ಅದರ ಬದಲಿಗೆ ಆಹಾರಗಳನ್ನು ಹಿಂಸೆಯಿಂದ ಲಭಿಸುವಂಥವೆಂದೂ, ಅಹಿಂಸೆಯಿಂದ ಲಭಿಸುವಂಥವೆಂದೂ ವಿಭಜನೆ ಮಾಡಿದಾಗ ಹಾಲು ಅಹಿಂಸೆಯ ಮೂಲಕ ಲಭಿಸುವ ಆಹಾರ ಭಾಗಕ್ಕೆ ಬೀಳುತ್ತದೆ. ನಮ್ಮ ದೇಶದಲ್ಲಿ ಶಾಕಾಹಾರಿಗಳೆಂದು ಹೇಳಿಕೊಳ್ಳುವವರು ಹಿಂಸೆಯನ್ನೇ ಆಚರಿಸುತ್ತಾರೆ. ಅವರ ದೃಷ್ಟಿಯಲ್ಲಿ ಹಾಲು ಕೆನೆ, ಬೆಣ್ಣೆ, ತುಪ್ಪ, ಮೊಸರು ಮುಂತಾದುವು ಶಾಕಾಹಾರದ ಭಾಗಕ್ಕೆ ಬರುತ್ತವೆ. ಕೆಲವರು ಕೋಳಿ ಮುಂತಾದ ಮೊಟ್ಟೆಗಳನ್ನು ಕೂಡಾ ಶಾಕಾಹಾರವೆಂದೇ ಹೇಳುತ್ತಾರೆ. ಕಾರಣವೇನೆಂದರೆ ಅವುಗಳಲ್ಲಿ ಪ್ರಾಣಿ ಸಹಜವಾದ ಅಂಗ ನಿರ್ಮಾಣ, ನರಗಳು, ರಕ್ತಪ್ರಸ್ರವಣಗಳಿರುವುದಿಲ್ಲ. ಆದರೆ ಅಮೆರಿಕಾದಲ್ಲಿ "ವೈಜಿಟೇರಿಯನ್ಸ್" ಎಂದು ಹೇಳಿಕೊಳ್ಳುವವರು ಯಾವುದೇ ಪ್ರಾಣಿ ಸಂಬಂಧದ ಆಹಾರವನ್ನೂ ಮುಟ್ಟರು. ಕಡೆಗೆ ಲಿವರ್ ಎಕ್ಸ್‌ಟ್ರಾಕ್ಟನ್ನು ಔಷಧವಾಗಿ ತೆಗೆದುಕೊಂಡವನು ಕೂಡಾ ಅವರ ಲೆಕ್ಕದಲ್ಲಿ "ವೈಜಿಟೇರಿಯನ್" ಅಲ್ಲ. ಗಾಂಧಿಯನ್ನೂ, ಬೆರ್ನಾರ್ಡ್‌ಷಾನನ್ನೂ ವೈಜಿಟೇರಿಯನ್ಸ್ ಎಂದು ಗುರುತಿಸಲು ಅವರು ಒಪ್ಪುವುದಿಲ್ಲ.

**ಎಸ್. ಎಲ್. ಎನ್. ಮೂರ್ತಿ, ಭಿಲ್ಯಾನಗರ್**

ಪ್ರ: ಬುದ್ಧನು ಅಹಿಂಸಾ ವಾದಿಯಾದರೂ ಬೌದ್ಧರಲ್ಲಿ ಅನೇಕರು ಮಾಂಸಾಹಾರಿಗಳಾಗಿರುವುದು ಏತರಿಂದ? ಬುದ್ಧನೇ ಸ್ವಯಂ ಮಾಂಸಾಹಾರ ತಿಂದು ತಂದುಕೊಂಡ ರೋಗದಿಂದಲೇ ಸತ್ತುಹೋದನೆಂಬುದು ಹೇಗಾಯಿತು?

ಉ: ಬೌದ್ಧವು ಶಾಕಾಹಾರವನ್ನು ಪ್ರಚಾರಮಾಡಲಿಲ್ಲ. ಅದು ಅಹಿಂಸೆಯನ್ನು ಮಾತ್ರವೇ ಪ್ರಚಾರಮಾಡಿದೆ ಶ್ರೀಲಂಕಾ, ಬರ್ಮಾ, ಚೀನಾ, ಜಪಾನ್, ಇಂಡೋ ಚೀನಾ, ಕೊರಿಯಾ ವಗೈರೆ ದೇಶಗಳಲ್ಲಿ ಈ ದಿನಗಳಲ್ಲಿ ಕೂಡಾ ಬೌದ್ಧ ಮತವು ನಿಂತಿದ್ದರೂ, ಈ ದೇಶಗಳಲ್ಲಿಯ ಬೌದ್ಧರು ಎಂದಿಗೂ ನಿಯಮಬದ್ಧರಾದ ಶಾಕಾಹಾರಿಗಳಲ್ಲ. ಆದರೆ ಬೌದ್ಧರು ಜೀವಹಿಂಸೆ ಮಾಡಬಾರದು, ಮೃಗಗಳನ್ನು ಕೊಲ್ಲಬಾರದು ಎಂಬ ನಿಯಮಕ್ಕೆ ಬದ್ಧರಾಗಿದ್ದಾರೆ. ಬುದ್ಧನ ಆಜನ್ಮ ವೈರಿಯಾದ ದೇವದತ್ತನು ತನ್ನ ಕೆಲವು ನಿಯಮಗಳನ್ನು ಆಮೋದಿಸಬೇಕೆಂದು ಬುದ್ಧನನ್ನು ಕೇಳಿದನು. ಅದರಲ್ಲಿ ಬೌದ್ಧರು ಶಾಕಾಹಾರಿಗಳಾಗುವುದು ಒಂದು. ಅದಕ್ಕೆ ಬುದ್ಧನು ಒಪ್ಪಲಿಲ್ಲ. ಬೌದ್ಧರು ಆಹಾರವನ್ನು ಭಿಕ್ಷೆ ಬೇಡಿ ಸಂಪಾದಿಸುವರು. ಅವರಿಗೆ ಕಬಳ ನೀಡುವವರು ಶಾಕಾಹಾರಿಗಳಾಗಬೇಕೆಂದು ಶಾಸಿಸುವ ಅಧಿಕಾರವು ತನಗಿಲ್ಲವೆಂದು ಬುದ್ಧನು ಹೇಳಿದ್ದಾನೆ. ನಮ್ಮ ದೇಶದಲ್ಲಿ ಶಾಕಾಹಾರವನ್ನು ಪ್ರಾಕ್ಟೀಸ್ ಗೊಳಿಸಿದವರು ಜೈನರು. ಜೈನರ ಪ್ರಭಾವವಿಲ್ಲದಿರುವಲ್ಲಿ, ಕಾಶ್ಮೀರದಲ್ಲಿಯಂತೆ ಬ್ರಾಹ್ಮಣರು ಕೂಡಾ ಮಾಂಸಾಹಾರಿಗಳೇ.



## ೭೭

ಸಹಸ್ರಬುದ್ಧಿ, ಶತಬುದ್ಧಿ, ಏಕಬುದ್ಧಿಗಳ ಕಥೆಯನ್ನು ಕೇಳಿ ಅತಿಲೋಭಿ, "ನೀನು ಹೇಳುವುದನ್ನು ನಿಜವೆಂದು ಒಪ್ಪಿಕೊಳ್ಳಲು ಸಾಧ್ಯವಿಲ್ಲ ಬಿಡು. ಇದರಲ್ಲಿ ವಿಧಿನಿರ್ಣಯವೆಂಬುದೇನೂ ಮುಖ್ಯವಾಗಿಲ್ಲ. ಏಕಬುದ್ಧಿ ಕಪ್ಪೆಗೆ ಲೋಕಜ್ಞಾನ ಚೆನ್ನಾಗಿದ್ದುದರಿಂದಲೇ ಅಪಾಯದಿಂದ ಬದುಕಿ ಉಳಿಯಲು ಸಾಧ್ಯವಾಯಿತು. ಉಳಿದ ಇಬ್ಬರಿಗೂ ಅಂತಹ ಲೋಕಜ್ಞಾನವಿರಲಿಲ್ಲ. ಅಷ್ಟೇಹೊರತು ದುರಾಶೆಯಿಂದ ಉಂಟಾಗುವ ದುಷ್ಫಲಿತವನ್ನು ತಿಳಿಯಬೇಕಾದರೆ ಕೋತಿಯ ಮುಂದಾಲೋಚನೆ ಎಂಬ ಕಥೆಯನ್ನು ಕೇಳು" ಎಂದು ಹೀಗೆ ಕಥೆಯನ್ನು ಹೇಳಿದನು :

ಒಂದು ಕಾಲದಲ್ಲಿ ಚಂದ್ರನೆಂಬ ಹೆಸರಿನ ರಾಜನಿದ್ದನು. ಅವನ ಕುಮಾರರಿಗೆ ಕೋತಿಗಳೊಂದಿಗೆ ಆಡುವುದೆಂದರೆ ಬಹಳ ಇಷ್ಟ. ಆದುದರಿಂದ ಅವರು ಬಗೆಬಗೆಯ ತಿಂಡಿಪದಾರ್ಥಗಳನ್ನು ಅವುಗಳ ಮುಂದೆ ಹಾಕಿ, ರಾಜಭವನದ ಪಠಾರದೊಳಗೆ ಸೇರಿಸಿಕೊಂಡರು.

ಕೋತಿಗಳು ತಿಂಡಿಗಳ ರುಚಿ ಹಿಡಿದು ಚೆನ್ನಾಗಿ ತಿಂದು ಕೊಬ್ಬುತ್ತ, ರಾಜಭವನದ ಪಠಾರದೊಳಗೆ ಚೆನ್ನಾಗಿ ಪಳಗಿಕೊಂಡುವು. ಅವುಗಳಿಗೆಲ್ಲ ನಾಯಕನಾಗಿ ಒಂದು ಮುದಿಕೋತಿ ಇದ್ದಿತು. ಅದು ಬೃಹಸ್ಪತಿ, ಚಾಣಕ್ಯರಂತಹ ರಾಜನೀತಿಜ್ಞರು ಬರೆದ ರಚನೆಗಳನ್ನು ಕೇಳಿಕೇಳಿ, ವೈದ್ಯ, ಪಶುವೈದ್ಯ ಮೊದಲಾದುವನ್ನು ಕೂಡಾ ತಿಳಿದುಕೊಂಡಿದ್ದಿತು. ತುಂಬಾ ಬುದ್ಧಿವಂತ ಕೋತಿಯಾಗಿತ್ತು ಅದು.

ಮಹಾರಾಜನ ಆವರಣದಲ್ಲಿ ಕುರಿಟಗರುಗಳ ಮಂದೆಯೂ ಇದ್ದಿತು. ಅವುಗಳ ಮೇಲೆ ಚಿಕ್ಕ ಮಕ್ಕಳು ಕುಳಿತು ಸವಾರಿ ಮಾಡುವರು, ಆಡುವರು. ಅವುಗಳಲ್ಲಿ ಒಂದು ಟಗರು ದೊಡ್ಡ ತಿಂಡಿ ಬಾಕವಾಗಿತ್ತು. ಅದು ಸಮಯ ಸಿಕ್ಕಿದರೆ, ಅಡಿಗೆ ಕೋಣೆಯೊಳಗೆ ಹೊಕ್ಕು ಅಲ್ಲಿರುವುದನ್ನೆಲ್ಲಾ ತಿಂದು ತೀರಿಸಿಬಿಡುತ್ತಿತ್ತು. ಆಗ ಅಡಿಗೆಯವರು ಸಿಟ್ಟಿನಿಂದ ಕೈಗೆ ಏನು ಸಿಕ್ಕಿತೋ ಅದನ್ನೆತ್ತಿ ಟಗರನ್ನು ಹೊಡೆಯುವರು. ಕಟ್ಟಿಗೆಯಾದರೂ, ಕೋಲಾದರೂ ಗಡಿಗೆಯಾದರೂ



ಕಂಚಿನ ಪಾತ್ರವಾದರೂ ಯಾವುದೆಂದು ನೋಡದೆ ಟಗರನ್ನು ಹೊಡೆಯುವರು. ಅರ್ಧಪೆಟ್ಟು ತಿಂದು ತಪ್ಪಿಸಿಕೊಂಡು ಓಡಿ ಮತ್ತೆ ಮತ್ತೆ ಅದೇ ಕೆಲಸಮಾಡುತ್ತಿತ್ತು ಆ ಟಗರು.

ಇದನ್ನೆಲ್ಲಾ ನೋಡುತ್ತಾ ಇದ್ದ ಕೋತಿಗಳ ನಾಯಕನು ತನ್ನೊಳಗೆ ಹೀಗೆ ಅಂದುಕೊಳ್ಳುತ್ತಿದ್ದಿತು:

"ಈ ಟಗರಿನಿಂದ ಕೋತಿಗಳಿಗೆ ಮುಪ್ಪು ಬರುವುದು ಖಂಡಿತ. ಟಗರಿಗೂ ಅಡಿಗೆಯವರಿಗೂ ನಡೆಯುವ ಘರ್ಷಣೆಯಿಂದ ಕಡೆಗೆ ಅಪಾಯ ಬರುವುದು ಕೋತಿಗಳಿಗೇ. ಆ ತಿಂಡೀ ಬಾಕ ಟಗರಿಗೆ ಅಡಿಗೇ ಮನೆಯಲ್ಲಿ ತಯಾರಾಗುವ ಪಾಕಗಳೆಂದರೆ ಬಹಳ ಇಷ್ಟ. ಅದನ್ನು ನೋಡಿ ಅಡಿಗೆಯವರು ಕೈಗೆ ಸಿಕ್ಕಿದ್ದನ್ನೆತ್ತಿ ಹೊಡೆಯುತ್ತಾರೆ. ಥಕ್ಕನೆ ಅವರ ಕೈಗೆ ಉರಿಯುವ ಕಟ್ಟಿಗೆ ಸಿಕ್ಕಿದರೆ ಅದರಿಂದಲೇ ಹೊಡೆಯುತ್ತಾರೆ. ಆಗ ಆ ಟಗರಿನ ಶರೀರದ ರೋಮಗಳಿಗೆ ಬೆಂಕಿ ಹಿಡಿದೀತು. ಅದು ಓಡಿ ಹೋಗಿ ಅಶ್ವಶಾಲೆಯ ಪಕ್ಕದಲ್ಲಿರುವ ಕುರಿಗಳ ಕೊಟ್ಟಿಗೆಗೆ ತಲಪುತ್ತದೆ. ಉರಿಯನ್ನು ತಾಳಲಾಗದೆ ನೆಲದಲ್ಲಿ ಹೊರಳಾಡುತ್ತದೆ. ಆಗ ನೆಲದಲ್ಲಿದ್ದ ಒಣ ಹುಲ್ಲಿಗೆ ಬೆಂಕಿ ಹಿಡಿದು ಅಶ್ವಶಾಲೆಯ ಮುಳಿಹುಲ್ಲಿನ ಮಾಡಿಗೆ ಬೆಂಕಿ ಹಾರಿಬಿಡುತ್ತದೆ. ಮತ್ತೇನು ? ಕೆಲವು ಕುದುರೆಗಳು ಸಾಯಬಹುದು. ಕೆಲವು ಕುದುರೆಗಳು ಸಾವಿನಿಂದ ಪಾರಾಗಿ ಓಡಿದರೂ ಮತ್ತೆ ಕೆಲವು ಸಾಯುತ್ತವೆ. ಕುದುರೆಗಳ ಶರೀರದಲ್ಲಾದ ಸುಟ್ಟ ಬೊಕ್ಕೆ ಗಾಯಗಳಿಗೆ, ಆಗಲೇ ಕೊಂದ ಕೋತಿಗಳ ಕೊಬ್ಬಿನ ಮುಲಾಮು ಹಚ್ಚಿ ಚಿಕಿತ್ಸೆ ಮಾಡಿದರೆ ಗುಣವಾಗುತ್ತದೆಂದು ಶಾಲಿಹೋತ್ರನಂತಹ ಪಶುವೈದ್ಯ ಶ್ರೇಷ್ಠನು ಹೇಳಿದ್ದಾನೆ. ಸುಟ್ಟ ಗಾಯಗಳಿಗೆ ಕೋತಿಯ ಕೊಬ್ಬು ಅತ್ಯುತ್ತಮವಾದ ಔಷಧವಂತೆ. ತನ್ನ ಉತ್ತಮ ಜಾತಿಯ ಕುದುರೆಗಳು ಸುಟ್ಟಬೊಕ್ಕೆಗಳಿಂದ ಒದ್ದಾಡಿಕೊಂಡಿದ್ದರೆ ರಾಜನು ಆಸ್ಥಾನದ ಪಶುವೈದ್ಯನ ಆಲೋಚನೆ ಕೇಳುತ್ತಾನೆ. ಅವನು ಹೇಗೂ ಈ ಚಿಕಿತ್ಸೆಯನ್ನೇ ಹೇಳುತ್ತಾನೆ. ರಾಜನಿಗೆ ಕುದುರೆಗಳೇ ಹೆಚ್ಚಲ್ಲದೆ ಕೋತಿಗಳೆಂದರೆ ಏನಾಗಬೇಕಾಗಿದೆ ? ಆದ್ದರಿಂದ ಕೂಡಲೇ ಎಲ್ಲಾ ಕೋತಿಗಳನ್ನೂ ಹಿಡಿದು ಕೊಲ್ಲಿಸಿ, ಬೇಕಾದಷ್ಟು ಕೋತಿಗಳ ಕೊಬ್ಬು ತೆಗೆಯಿಸಿ, ಎಲ್ಲಾ ಕುದುರೆಗಳಿಗೂ ಚಿಕಿತ್ಸೆ ಮಾಡಿಸುತ್ತಾನೆ. ಇದೆಲ್ಲಾ ಒಂದುದಿನ ನಡೆದೇ ತೀರುತ್ತದೆ. ಆದುದರಿಂದ ನನ್ನ ಕೋತಿಗಳನ್ನು ರಕ್ಷಿಸಬೇಕಾದುದು ನನ್ನ ವಿಧಿ. ಅದಕ್ಕೆ ತಕ್ಕ ಜಾಗ್ರತೆಯನ್ನು ಮೊದಲೇ ತೆಗೆದುಕೊಳ್ಳಬೇಕು."

ಅದು ಒಂದು ನಿಶ್ಚಯಕ್ಕೆ ಬಂದು ಎಲ್ಲಾ ಕೋತಿಗಳನ್ನೂ ಸಮಾವೇಶಗೊಳಿಸಿ, ಅವುಗಳಿಗೆ ಬರಲಿರುವ ಆಪತ್ತನ್ನು ಕುರಿತು ವಿವರವಾಗಿ ಹೇಳಿತು. ಕಡೆಗೆ ಅದು ಕೋತಿಗಳಿಗೆ ಈರೀತಿಯಾಗಿ ಬುದ್ಧಿ ಹೇಳಿತು :

"ಆ ತಿಂಡಿಬಾಕ ಟಗರಿಗೂ ಅಡಿಗೆಯವರಿಗೂ ನಡೆಯುವ ಕಿತ್ತಾಟದಿಂದ ನಾನು ಹೇಳಿದಂತೆ ನಮಗೆಲ್ಲಾ ಅಪಾಯಕಾರಿಯಾಗಿ ಪರಿಣಮಿಸುತ್ತ ದೆಂದು ಗಟ್ಟಿಯಾಗಿ ತಿಳಿಯಿರಿ. ಬದುಕಿರುವಷ್ಟು ಕಾಲದವರೆಗೆ ಬದುಕಬೇಕೆಂದು ಬಯಸುವವರು ಜಗಳ ಗಂಟರ ನಡುವಿನಲ್ಲಿ ಇರಲೇ ಬಾರದು. ಈ ಬಗೆಯ ಸಂಘರ್ಷಣೆಗಳಿಂದ ಹಚ್ಚಗಿದ್ದ ರಾಜ್ಯಗಳು ಸಹಾ ಭಗ್ಗನೆ ಸುಟ್ಟು ಹೋಗುತ್ತವೆ. ಕೆಟ್ಟ ಕೆಟ್ಟ ಬೈಗುಳ ಮಾತುಗಳು ದೀರ್ಘಕಾಲದ ಸ್ನೇಹಗಳನ್ನು ಕೂಡಾ ಒರೆಸಿ ಹಾಕುತ್ತವೆ. ಹೊಲ್ಲದ ಕೆಲಸಗಳನ್ನು ಮಾಡಿದರೆ ಎಂತಹ ಕೀರ್ತಿಗೂ ಕಳಂಕ ಬರುತ್ತದೆ. ಆದುದರಿಂದ ಆಪತ್ತು ಬರುವ ವರೆಗೂ ಕಾಯದೆ ನಾವು ಮುಂದಾಗಿ ನಮ್ಮ ಅರಣ್ಯದ ಕಡೆಗೇ ಹೋಗಿಬಿಡೋಣ, ನಡೆಯಿರಿ."

ವೃದ್ಧ ನಾಯಕನ ಹಿತೋಪದೇಶಗಳನ್ನು ಕೇಳಿ ಕೋತಿಗಳೆಲ್ಲ ಕಿಲಕಿಲನೆ ನಕ್ಕವು. ಅವು ತಮ್ಮ ನಾಯಕನನ್ನು ನೋಡಿ, "ನಿನಗೆ ಮುದಿಹುಚ್ಚು ಕವಿದಿದೆ. ಬುದ್ಧಿಮಂಕಾಗಿ ಹೋಗಿದೆ. ಧೈರ್ಯ ಸತ್ತಿದೆ. ಆದ್ದರಿಂದಲೇ ಏನೇನೋ ಆಪತ್ತುಗಳನು ಊಹಿಸಿಕೊಂಡು ನಮಗೆ ಅರ್ಥವಿಲ್ಲದ ಆಲೋಚನೆ ಹೇಳುತ್ತೀ! ನಾವಂತೂ ಸ್ವರ್ಗದಂತಹ ಈ ಪ್ರದೇಶವನ್ನು ಬಿಟ್ಟು ಬಾರೆವು. ರಾಜಕುಮಾರರು ಕೊಡುವ ರುಚಿರುಚಿಯಾದ ತಿಂಡಿಗಳನ್ನು ಬಿಟ್ಟು, ಕಾಡಿನ ಹುಳ್ಳಗೆ, ಉಪ್ಪಗೆ, ಚೊಗರಿನ, ಕಹಿಯಾದ ಕಾಯಿಕರಂಡೆಗಳನ್ನು ನಾವು ತಿನ್ನಲಾರೆವಪ್ಪ" ಎಂದು ಹೇಳಿದುವು.

ಅವುಗಳ ಮಾತು ಕೇಳಿ ಮುದಿಕೋತಿಗೆ ಕಣ್ಣೀರು ತುಂಬಿಕೊಂಡಿತು. ಅದು ಅವುಗಳನ್ನು ನೋಡಿ ಮತ್ತೆ ಹೀಗೆಂದಿತು : "ಮೂಢ ಮತಿಗಳೇ! ಈ ಸುಖಗಳು ಸ್ಥಿರವಾದುವಲ್ಲವೆಂದು ಗ್ರಹಿಸಲಾಗದೆ ಹೋದಿರಲ್ಲಾ! ಈ ಸುವಾಸನೆಯ ಆಹಾರಪದಾರ್ಥ



ಗಳೇ ನಿಮ್ಮೆಲ್ಲರ ಪ್ರಾಣಕ್ಕೂ ವಿಷವಾಗಿ ಪರಿಣಮಿಸು ತ್ತವೆ. ನನ್ನ ಕಣ್ಣೆದುರಿನಲ್ಲೇ ನೀವೆಲ್ಲಾ ಸಾಯು ವುದನ್ನು ನೋಡಲು ನನ್ನಿಂದಾಗದು. ನಾನು ಈಗಲೇ ಅರಣ್ಯಕ್ಕೆ ಹೋಗುತ್ತೇನೆ. ಸ್ನೇಹಿತರ ದೀನಪರಿಸ್ಥಿತಿಯನ್ನೂ, ತಮ್ಮ ಮನೆಯೊಳಗೆ ಶತ್ರುಗಳು ಪ್ರವೇಶಿಸುವುದನ್ನೂ, ತಮ್ಮ ದೇಶ ವನ್ನು ಪರಕೀಯರು ಕೊಳ್ಳೆ ಹೊಡೆಯುವುದನ್ನೂ, ತನ್ನ ಕುಟುಂಬವು ನಾಶವಾಗುವುದನ್ನೂ ಕಣ್ಣಾರೆ ನೋಡದಿರುವವನು ಧನ್ಯನೆನ್ನುತಾರೆ."

ಹೀಗೆ ಹೇಳಿ ಆ ಮುದಿ ಕೋತಿ ಒಂಟಿಯಾಗಿ ಕಾಡಿಗೆ ಹೊರಟುಹೋಯಿತು. ಮುಂದೆ ಕೆಲವು ದಿನಗಳು ಮಾತ್ರ ಎಂದಿನಂತೆ ಸಾಗಿದುವು. ಆಮೇಲೆ ಒಂದುದಿನ ತಿಂಡಿಬಾಕ ಟಗರು ತನ್ನ ಅಭ್ಯಾಸದಂತೆ ಅಡಿಗೇ ಕೋಣೆಯೊಳಗೆ ಪ್ರವೇಶಿಸಿ ರಾಜನಿಗಾಗಿ ತಯಾರಿಸಿಟ್ಟಿದ್ದ ಪ್ರತ್ಯೇಕವಾದ ಅಡಿಗೇ ಪದಾರ್ಥ ಗಳನ್ನು ತಿನ್ನತೊಡಗಿತು. ಇನ್ನೂ ಅಡಿಗೇ ಕೆಲಸ

ಪೂರ್ತಿ ಮುಗಿಯಲೂ ಇಲ್ಲ. ಒಲೆಯಲ್ಲಿ ಕೆಲವು ಪದಾರ್ಥಗಳು ಇನ್ನೂ ಕುದಿಯುತ್ತಿದ್ದುವು.

ಟಗರಿನ ಮೇಲೆ ಅಡಿಗೆಯವರಿಗೆ ಬಂದ ಕೋಪಕ್ಕೆ ಮೇರೆ ಇರಲಿಲ್ಲ. ಅವರ ಕೈಗೆ ಬೇರೇನೂ ಸಿಕ್ಕದೆ, ಉರಿಯುವ ಕೊಳ್ಳಿಯನ್ನೇ ತೆಗೆದು ಆ ಟಗರಿನ ಮೇಲೆ ನಾಲ್ಕಾರೇಟು ಬಾರಿಸಿದರು. ಅದು ನೋವಿನಿಂದ ಕಿರಿಚುತ್ತಾ ಹೋಗುತ್ತಿರಲು, ಅದರ ಉದ್ದುದ್ದವಾದ ಉಣ್ಣೇ ಕೂದಲಿಗೆ ಬೆಂಕಿ ಹಿಡಿಯಿತು. ಅದು ಕುದುರೆಯ ಶಾಲೆಯ ಹತ್ತಿರದ ಒಣಹುಲ್ಲ ರಾಶಿಯಲ್ಲಿ ಬಿದ್ದು ಹೊರಳಾಡಿತು. ಹುಲ್ಲಿಗೆ ಬೆಂಕಿ ಹಿಡಿದು ಅಶ್ವಶಾಲೆಗೂ ಬೆಂಕಿ ಹತ್ತಿಕೊಂಡಿತು. ಕೆಲವು ಕುದುರೆಗಳು ಸತ್ತವು. ಕೆಲವು ಕುದುರೆಗಳು ಕುರುಡಾದುವು. ನೌಕರರು ಓಡಿ ಬಂದು ಬಹಳ ಕಷ್ಟಪಟ್ಟು ಕೆಲವು ಕುದುರೆಗಳನ್ನು ಕಾಪಾಡಿದರು. ಆದರೆ ಅವುಗಳ ಶರೀರವೆಲ್ಲಾ ಸುಟ್ಟು ಬೊಕ್ಕೆಗಳೆದ್ದು ನೋವಿನಿಂದ ಆವರಣದೊಳಗೆಲ್ಲಾ ತುಳ್ಳಾಡತೊಡಗಿದುವು.

ಕುದುರೆಗಳೆಂದರೆ ತುಂಬಾ ಪ್ರೀತಿಯುಳ್ಳ ರಾಜನು, ಅವುಗಳ ದೀನ ಸ್ಥಿತಿಯನ್ನು ನೋಡಿ ಬಹಳವಾಗಿ ದುಃಖಿಸುತ್ತ, ಆಸ್ಥಾನದ ಪಶುವೈದ್ಯನನ್ನು ಕರೆಯಿಸಿದನು. "ಈ ಕುದುರೆಗಳ ನೋವನ್ನು ಪರಿಹರಿಸುವಂತಹ ಒಳ್ಳೆಯ ಚಿಕಿತ್ಸೆ ಮಾಡಿರಿ" ಎಂದು ರಾಜನು ವೈದ್ಯನಿಗೆ ಅಪ್ಪಣೆ ಮಾಡಿದನು. ವೈದ್ಯನು ಕೂಡಲೇ ವೈದ್ಯಗ್ರಂಥವನ್ನು ಬಿಡಿಸಿ ನೋಡಿ, "ಮಹಾರಾಜರೆ, ಪಶುವೈದ್ಯದ ಪಿತಾಮಹನೆನಿಸಿದ ಶಾಲಿಹೋತ್ರನು ಹೀಗೆ ಹೇಳಿದ್ದಾನೆ. ಆಗ ತಾನೇ ಕೊಂದ ಕೋತಿಗಳ ಕೊಬ್ಬನ್ನು ತೆಗೆದು, ಕುದುರೆಗಳ ಸುಟ್ಟ ಬೊಕ್ಕೆಗಳ ಮೇಲೆ ಪತ್ತೆಯಿಟ್ಟು ಪಟ್ಟಿ ಕಟ್ಟಿದರೆ, ಸೂರ್ಯೋದಯವಾದ ಕೂಡಲೇ ಕತ್ತಲೆ ಓಡಿಹೋಗುವ ಹಾಗೆ, ಅವುಗಳ ನೋವು ಮಾಯವಾಗುತ್ತದೆ ಎಂದಿದ್ದಾನೆ. ಆದುದರಿಂದ ಕೂಡಲೇ ಆ ಚಿಕಿತ್ಸೆಯನ್ನು ಮಾಡೋಣ" ಎಂದನು.

ಆವರಣದೊಳಗಿದ್ದ ಎಲ್ಲಾ ಕೋತಿಗಳನ್ನೂ ಕೊಲ್ಲುವಂತೆ ರಾಜನು ಅಪ್ಪಣೆ ಮಾಡಿದನು. ಕೂಡಲೇ ನೌಕರರು ತಿಂಡಿಗಳನ್ನು ಕೊಡುವ ನೆವನದಲ್ಲಿ ಎಲ್ಲಾ ಕೋತಿಗಳನ್ನೂ ಸೇರಿಸಿ ಒಮ್ಮೆಗೇ ಹಿಡಿದು ಕೊಂದು, ಅವುಗಳ ಕೊಬ್ಬು ತೆಗೆದು, ಕುದುರೆಗಳ ಗಾಯಗಳಿಗೆ ಪತ್ತೆ ಕಟ್ಟಿದರು.

ಅರಮನೆಯ ಆವರಣದಲ್ಲಿದ್ದ ತನ್ನ ಕಡೆಯವರೆಲ್ಲಾ ಸತ್ತುಹೋದ ಸಮಾಚಾರವನ್ನು ಕಾಡಿನಲ್ಲಿದ್ದ ಮುದಿ ಕೋತಿಗೆ ಒಂದು ಕಾಗೆ ಹೋಗಿ ಹೇಳಿತು. ಹಾಗೆ ಸತ್ತ ಕೋತಿಗಳಲ್ಲಿ ಆ ಮುದಿಕೋತಿಯ ಸಂತಾನವೂ, ಅವುಗಳ ಸಂತಾನವೂ, ದಾಯಾದಿಗಳೂ, ಇತರ ಬಂಧುಗಳೂ ಇದ್ದುವು.





# ಕೂಡಿಬಾರದಕೆಲಸ

ಎಂತಹ ಪಂಥಕ್ಕೂ ಹಿಂಜರಿಯದವನಾದ ರಾಜಾ ತ್ರಿವಿಕ್ರಮನು ಹಿಂತಿರುಗಿ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಇಳಿಸಿ ತನ್ನ ಹೆಗಲಿನ ಮೇಲೆ ಹೊತ್ತುಕೊಂಡು ಮೌನವಾಗಿ ಸ್ಮಶಾನದ ಕಡೆಗೆ ನಡೆಯು ತೊಡಗಿದನು. ಆಗ ಶವದೊಳಗೆ ಸೇರಿಕೊಂಡಿರುವ ಬೇತಾಳವು ಮಾತಾಡಲು ತೊಡಗಿತು: "ಎಲೌ ರಾಜನೇ, ನೀನು ಹೀಗೆ ಬಿಡದೆ ಮಾಡಿಕೊಂಡಿರುವ ಕೆಲಸವು ನಿನಗೆ ಕೂಡಿ ಬರುವುದಿಲ್ಲವೇನೋ ಎಂದು ನನಗೆ ಸಂದೇಹವಾಗಿದೆ. ಕೆಲವರಿಗೆ ಕೆಲವು ಕೆಲಸಗಳು ಕೂಡಿಬಾರವು. ಒಂದು ಕೆಲಸ ತನಗೆ ಕೂಡಿಬಾರದೆಂದು ತಿಳಿದ ಮೇಲೆ ರಂಗಯ್ಯ ಶ್ರೇಷ್ಠಿಯ ಹಾಗೆ ಆ ಕೆಲಸದ ಗೊಡವೆ ಬಿಟ್ಟುಬಿಡಬೇಕು. ನಿನಗೆ ದಾರಿಯ ಶ್ರಮ ತಿಳಿಯದ ಹಾಗೆ ಆ ಕಥೆ ಹೇಳುತ್ತೇನೆ. ಕೇಳಿಕೊಂಡೇ ನಡೆಯುವಿಯಂತೆ." ಹೀಗೆ ಹೇಳಿ ಬೇತಾಳವು ಕಥೆಯನ್ನು ಪ್ರಾರಂಭಮಾಡಿತು :

ಕೆಲವಾರು ವರ್ಷಗಳ ಹಿಂದೆ ರತ್ನಗಿರಿಯಲ್ಲಿ ರಂಗಯ್ಯ ಶ್ರೇಷ್ಠಿ ಮತ್ತು ಗೋವಿಂದ ಶ್ರೇಷ್ಠಿ ಎಂಬ ಇಬ್ಬರು ಸ್ನೇಹಿತರಿದ್ದರು. ಆದರೆ ಇಬ್ಬರದೂ ಬೇರೆ



ಪೂರ್ವೀಕರು ಸಮುದ್ರ ವ್ಯಾಪಾರಮಾಡಿಕೊಂಡಿದ್ದರು. ಒಂದುಸಾರಿ ರಂಗಯ್ಯ ಶ್ರೇಷ್ಠಿಯ ತಾತ ತುಫಾನಿಗೆ ಸಿಕ್ಕಿ ತನ್ನ ಹಡಗಿನೊಂದಿಗೆ ಸಮುದ್ರದ ಪಾಲಾದನು. ಒಂದೇಬಾರಿ ಸರ್ವನಾಶವಾಗಿ ಹೋಗಿತ್ತು. ಅನಂತರ ರಂಗಯ್ಯ ಶ್ರೇಷ್ಠಿಯ ತಂದೆ ಭೂದೇವಿಯನ್ನು ನಂಬಿಕೊಂಡು ವ್ಯವಸಾಯವನ್ನು ಪ್ರಾರಂಭಿಸಿ ಒಳ್ಳೆಯ ಸ್ಥಿತಿಗೆ ಬಂದನು. ರಂಗಯ್ಯ ಶ್ರೇಷ್ಠಿ ಅದೇ ವ್ಯವಸಾಯವನ್ನು ಇನ್ನಷ್ಟು ಒಳ್ಳೆಯ ಸ್ಥಿತಿಗೆ ತಂದನು. ಈಗ ರಂಗಯ್ಯ ಶ್ರೇಷ್ಠಿಗೆ ಯಾವ ಕೊರತೆಯೂ ಇಲ್ಲ.

ಹೀಗಿರುವಾಗ ಒಂದುದಿನ ಗೋವಿಂದ ಶ್ರೇಷ್ಠಿ ರಂಗಯ್ಯ ಶ್ರೇಷ್ಠಿಯೊಂದಿಗೆ, ತಾನು ಸುಗಂಧ ದ್ರವ್ಯಗಳನ್ನು ಸಮುದ್ರ ವ್ಯಾಪಾರದ ಮೂಲಕ ದ್ವೀಪಾಂತರಗಳಲ್ಲಿ ನಡೆಸಿ ಭಾರೀ ಲಾಭ ಸಂಪಾದಿಸುವ ಯೋಜನೆ ಹಾಕಿದ್ದೇನೆಂದೂ, ರಂಗಯ್ಯ ಶ್ರೇಷ್ಠಿ ಕೂಡಾ ಅರ್ಧ ಭಾಗಕ್ಕೆ ಬಂದರೆ ಇಬ್ಬರೂ ಲಾಭ ಪಡೆಯ ಬಹುದೆಂದೂ, ಖರ್ಚುಗಳು ಕೂಡಿ ಬರುತ್ತ ವೆಂದೂ ಒತ್ತೊತ್ತಿ ಹೇಳಿದನು.

ಸಾಧಾರಣವಾಗಿ ವರ್ತಕ ವೃತ್ತಿ ತನಗೆ ಕೂಡಿ ಬಾರದೆಂದು ಹೇಳುತ್ತಿದ್ದ ರಂಗಯ್ಯ ಶ್ರೇಷ್ಠಿ, ಯಾವ ಆಕರ್ಷಣೆಗೆ ಒಳಗಾದನೋ ತಿಳಿಯದು. ತಾನು ಕೂಡಾ ಗೋವಿಂದ ಶ್ರೇಷ್ಠಿಯಷ್ಟೇ ಮೂಲ ಧನ ವನ್ನು ಹಾಕಿ, ಸಮುದ್ರ ವ್ಯಾಪಾರದಲ್ಲಿ ಭಾಗಸ್ಥ ನಾಗಲು ಒಪ್ಪಿಕೊಂಡನು.

ಇದು ಅವನ ಹೆಂಡತಿಗೆ ಇಷ್ಟವಿರಲಿಲ್ಲ. ಅವಳು ಬೇಡವೆಂದರೂ ರಂಗಯ್ಯ ಶ್ರೇಷ್ಠಿ ಲಕ್ಷ್ಯಮಾಡಲಿಲ್ಲ. ಅವನು ದೃಢ ನಿರ್ಧಾರದಿಂದ ತನ್ನ ಭೂಮಿಯಲ್ಲಿ ಅರ್ಧಭಾಗವನ್ನು ಮಾರಿ, ಆ ಹಣದಿಂದ ಸುಗಂಧ ದ್ರವ್ಯಗಳನ್ನು ಕೊಂಡು ಕೊಂಡು, ತನ್ನ ನಾಲ್ಕುಮಂದಿ ಮಗಂದಿರನ್ನೂ ಕರೆದುಕೊಂಡು ಗೋವಿಂದ ಶ್ರೇಷ್ಠಿ ಯೊಂದಿಗೆ ಹಡಗಿನಲ್ಲಿ ಹೊರಟನು.

ಬೇರೆ ವೃತ್ತಿಯಾಗಿತ್ತು. ರಂಗಯ್ಯ ಶ್ರೇಷ್ಠಿ ವೈಶ್ಯನೇ ಆದರೂ ವ್ಯವಸಾಯದ ಕೆಲಸವನ್ನು ಮಾಡುತ್ತ ಸುಖವಾಗಿ ಜೀವಿಸಿಕೊಂಡಿದ್ದನು. ವ್ಯವಸಾಯ ದಲ್ಲಿಯೇ ಅವನು ಪಳಗಿ ನುರಿತು ಹೋಗಿದ್ದನು. ಗೋವಿಂದ ಶ್ರೇಷ್ಠಿ ವರ್ತಕ ವೃತ್ತಿಯಲ್ಲಿ ಸಾಮರ್ಥ್ಯ ವುಳ್ಳವನಾಗಿ ತುಂಬಾ ಸಂಪಾದಿಸಿಕೊಂಡಿದ್ದನು.

ಒಂದುಸಾರಿ ಗೋವಿಂದ ಶ್ರೇಷ್ಠಿ ರಂಗಯ್ಯ ಶ್ರೇಷ್ಠಿ ಯನ್ನು ಕುರಿತು, "ರಂಗಯ್ಯಾ, ನೀನು ನಮ್ಮ ಕುಲ ವೃತ್ತಿಯಾದ ವ್ಯಾಪಾರದ ಕೆಲಸ ಬಿಟ್ಟು ವ್ಯವಸಾಯ ಮಾಡುವುದು ನನಗೇನೂ ಚೆನ್ನಾಗಿ ಕಾಣುವುದಿಲ್ಲ. ನಮ್ಮಂಥವರಿಗೆ ವ್ಯಾಪಾರವೇ ಹೇಳಿದ್ದು. ನೀನು ವ್ಯಾಪಾರ ಮಾಡುತ್ತಿದ್ದರೆ ಇಮ್ಮಡಿ ಮುಮ್ಮಡಿ ಧನಿಕನಾಗುತ್ತಿದ್ದಿ ಗೊತ್ತಾ" ಎಂದನು.

"ವ್ಯಾಪಾರವು ನಮ್ಮ ವಂಶಕ್ಕೆ ಕೂಡಿಬರುವುದಿಲ್ಲ ಬಿಡು" ಎಂದನು ರಂಗಯ್ಯ ಶ್ರೇಷ್ಠಿ. ಅವನ ತಾತ ಮುತ್ತಾತರ ಕಾಲದಲ್ಲಿ ರಂಗಯ್ಯ ಶ್ರೇಷ್ಠಿಯ

ನಡು ಸಮುದ್ರದಲ್ಲಿ ಅವರ ಹಡಗು ಭಾರಿ ತುಫಾನಿಗೆ ಸಿಕ್ಕಿಕೊಂಡಿತು. ವ್ಯಾಪಾರದ ಸರಕು ಗಳೆಲ್ಲವೂ ಒದ್ದೆಯಾಗಿ ಹಾಳಾಗಿ ಹೋದುವು. ಜೀವ ಮಾತ್ರ ಉಳಿಸಿಕೊಂಡು ಯಾವುದೋ ತೀರವನ್ನು ತಲುಪಿದರು. ನೆನೆದು ಹಾಳಾದ ಸರಕುಗಳನ್ನು ತೀರಾ ಅಗ್ಗಕ್ಕೆ ಮಾರಿ ನಷ್ಟವನ್ನು ಮೂಟೆ ಕಟ್ಟಿಕೊಂಡು ಮಿತ್ರರಿಬ್ಬರೂ ಬದುಕಿ ಉಳಿದುದೇ ದೊಡ್ಡದೆಂಬಂತೆ ಮನೆಗೆ ಬಂದು ಸೇರಿದರು.

ರಂಗಯ್ಯ ಶ್ರೇಷ್ಠಿಯ ಹೆಂಡತಿ, "ಹಾಳಾದ ಹಣ ಹೋದರೆ ಹೋಗಲಿ. ಗಂಡನೂ ಮಕ್ಕಳೂ ಪ್ರಾಣದೊಂದಿಗೆ ತಿರುಗಿ ಬಂದರಲ್ಲ, ಅಷ್ಟೇ ಸಾಕು" ಎಂದುಕೊಂಡು ತಾನು ಹರಕೆ ಹೇಳಿಕೊಂಡ ದೇವರಿಗೆಲ್ಲಾ ಹರಿಕೆ ಸಲ್ಲಿಸಿ ಬಂದಳು.

ಆದರೆ ಅವಳ ಸಮಾಧಾನ ಬಹಳ ದಿನ ಉಳಿಯಲಿಲ್ಲ. ರಂಗಯ್ಯ ಶ್ರೇಷ್ಠಿ ತನ್ನ ಉಳಿದ ಹೊಲಗಳನ್ನೆಲ್ಲಾ ಮಾರಿ ಮತ್ತೆ ಸುಗಂಧ ದ್ರವ್ಯಗಳನ್ನು ಕೊಂಡುಕೊಂಡು ಸಮುದ್ರ ವ್ಯಾಪಾರಕ್ಕೆ ಹೋಗಲು ತಯಾರಾದನು. ಅದನ್ನು ನೋಡಿ ಹೆಂಡತಿ ಮತ್ತೆ ಕುಂದಿಹೋದಳು. "ನೀನು ಕೂಡಾ ನನ್ನೊಂದಿಗೆ ಬರುವಿಯಾ ಗೋವಿಂದಯ್ಯಾ?" ಎಂದು ಕೇಳಿದನು ರಂಗಯ್ಯ ಶ್ರೇಷ್ಠಿ.

"ಅಯ್ಯೋ! ಮತ್ತೊಮ್ಮೆ ಮುಳುಗುವುದೇ? ನನ್ನಿಂದಾಗದಪ್ಪ!" ಎಂದನು ಗೋವಿಂದ ಶ್ರೇಷ್ಠಿ ರಂಗಯ್ಯ ಶ್ರೇಷ್ಠಿಯ ಸಾಹಸಕ್ಕೆ ಆಶ್ಚರ್ಯಪಡುತ್ತ.

ರಂಗಯ್ಯ ಶ್ರೇಷ್ಠಿ ತನ್ನ ಮಗಂದಿರನ್ನೂ ತನ್ನೊಂದಿಗೆ ಬರಲು ಕರೆದನು. "ನಾವು ಬಾರೆವು. ಬದುಕಿದ್ದರೆ ಬೇಡಿ ತಿಂದೇವು. ಇದ್ದ ಹೊಲಗದ್ದೆಗಳನ್ನೆಲ್ಲಾ ಮಾರಿಯಾಯಿತು. ಜೀವ ಉಳಿದರೆ ಕೂಲಿನಾಲಿಮಾಡಿಯಾದರೂ ಬದುಕುತ್ತೇವೆಯೇ ಹೊರತು ಸಮುದ್ರಕ್ಕೆ ಹೋಗಿ ಬೀಳಲು ನಮ್ಮಿಂದಾಗದು." ಎಂದರು ರಂಗಯ್ಯ ಶ್ರೇಷ್ಠಿಯ ಮಗಂದಿರು.



ಈ ಸಾರಿ ರಂಗಯ್ಯ ಶ್ರೇಷ್ಠಿಯ ಸಮುದ್ರ ವ್ಯಾಪಾರವು ಬಲು ಚೆನ್ನಾಗಿ ಸಾಗಿತು. ಹಾಕಿದ ಹಣಕ್ಕಿಂತ ನಾಲ್ಕು ಪಾಲು ಲಾಭ ಬಂದರೆ ಸಮುದ್ರ ವ್ಯಾಪಾರ ಸಾರ್ಥಕವಾದಂತೆ ಲೆಕ್ಕ. ರಂಗಯ್ಯ ಶ್ರೇಷ್ಠಿ ಹತ್ತು ಪಾಲು ಹೆಚ್ಚಿನ ಲಾಭ ಗಳಿಸಿಕೊಂಡು ಬಂದು, ತಾನು ಮಾರಿದ ಹೊಲಗಳಿಗಿಂತ ಇಮ್ಮಡಿ ಹೊಲಗದ್ದೆಗಳನ್ನು ಕೊಂಡು ಕೊಂಡು ಇತರ ಆಸ್ತಿಗಳನ್ನು ಕೂಡಾ ಸಂಪಾದಿಸಿದನು.

ಗೋವಿಂದ ಶ್ರೇಷ್ಠಿ ತಾನು ರಂಗಯ್ಯನೊಂದಿಗೆ ಸಮುದ್ರ ವ್ಯಾಪಾರಕ್ಕೆ ಹೋಗದೇ ಬಿಟ್ಟದ್ದಕ್ಕೆ ಪಶ್ಚಾತ್ತಾಪಪಟ್ಟನೋ ಏನೋ. ಅವನು ಮತ್ತೊಂದು ವರ್ಷ ರಂಗಯ್ಯ ಶ್ರೇಷ್ಠಿಯನ್ನು ನೋಡಿ, "ಈ ವರ್ಷ ಮತ್ತೆ ಸಮುದ್ರ ವ್ಯಾಪಾರಕ್ಕೆ ಹೋಗುವಿಯಾ?" ಎಂದು ಕೇಳಿದನು.

"ಇನ್ನು ಅದೃಷ್ಟ ಪರೀಕ್ಷೆಗೆ ಹೋಗಲಾರೆನಪ್ಪ ನನಗೆ ವರ್ತಕ ವೃತ್ತಿಯೇ ಕೂಡಿಬರುವಂಥದಲ್ಲ.

ಕೈಲಾಗುವ ಕೆಲಸ, ನನ್ನ ವ್ಯವಸಾಯ. ಇದೇ ಸಾಕು!" ಎಂದನು ರಂಗಯ್ಯ ಶ್ರೇಷ್ಠಿ.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ಈಗ ಹೇಳು ರಾಜಾ. ರಂಗಯ್ಯ ಶ್ರೇಷ್ಠಿಯ ಮನಸ್ತತ್ವವು ಎಂತಹುದು? ಅವನು ನಿಜಕ್ಕೂ ವರ್ತಕ ವೃತ್ತಿ ತನಗೆ ಕೂಡಿಬರುವುದಿಲ್ಲ ಅಂದುಕೊಂಡಿದ್ದರೆ ಗೋವಿಂದ ಶ್ರೇಷ್ಠಿಯ ಜತೆಯಲ್ಲಿ ಸಮುದ್ರ ವ್ಯಾಪಾರಕ್ಕೆ ಏಕೆ ಹೋದ? ಹಾಗೆ ಹೋದವನಿಗೆ ದೊಡ್ಡ ನಷ್ಟವಾಗಿ ಸಮುದ್ರ ವ್ಯಾಪಾರವು ಕೂಡಿ ಬರುವುದಿಲ್ಲವೆಂಬುದು ರುಜುವಾದ ಮೇಲೆ, ಎರಡನೇ ಸಾರಿ ಅದೇ ಸಮುದ್ರ ವ್ಯಾಪಾರಕ್ಕೆ ಹೋಗಿದ್ದಾನೆ. ತನ್ನ ಭೂಮಿಯನ್ನೆಲ್ಲಾ ಅದಕ್ಕಾಗಿ ಮಾರಿದ್ದಾನೆ. ಅದರಲ್ಲಿ ಅಪಾರ ಲಾಭವನ್ನು ಸಂಪಾದಿಸಿದವನು, ಆ ಮೇಲೆ ಅದು ತನಗೆ ಕೂಡಿಬರುವುದಿಲ್ಲವೆಂದು ಏಕೆ ಹೇಳಿದ? ಇಂತಹ ಅವನ ವಿಚಿತ್ರ ಪ್ರವರ್ತನೆಗೆ ಏನು ಅರ್ಥವೆಂದು ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಸಾವಿರ ಹೋಳಾಗಿ ಹೋಗುತ್ತದೆ." ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ವ್ಯವಸಾಯವೂ, ವ್ಯಾಪಾರವೂ ಬೇರೆ ಬೇರೆ ಮನಸ್ತತ್ವಗಳಿಗೆ ಅನುಕೂಲಿಸಿದಂಥವು. ಆ ಸಂಗತಿ ರಂಗಯ್ಯ ಶ್ರೇಷ್ಠಿಗೆ ಚೆನ್ನಾಗಿ ಗೊತ್ತು. ವರ್ತಕವೃತ್ತಿಯವನಿಗೆ ಜೂಜುಗಾರನಿಗಿರುವಂತಹ ಹುಚ್ಚು ಸಾಹಸವಿರಬೇಕು. ವ್ಯವಸಾಯಕ್ಕೆ ಶ್ರಮಿಸುವ ಶಕ್ತಿಯೂ ಸಹನೆಯೂ ಇರಬೇಕು. ತನಗೆ ವರ್ತಕ ವೃತ್ತಿ ಕೂಡಿ ಬರುವುದಿಲ್ಲವೆಂಬುದರಲ್ಲಿ ರಂಗಯ್ಯ ಶ್ರೇಷ್ಠಿಯ ಉದ್ದೇಶ ತನ್ನಲ್ಲಿ ಜೂಜುಗಾರನ ಮನಸ್ತತ್ವವಿಲ್ಲವೆಂಬುದೇ. ಅಷ್ಟೇ ಹೊರತು ವರ್ತಕದಲ್ಲಿ ತನಗೆ ಯಾವಾಗಲೂ ನಷ್ಟವೇ ಬರುತ್ತದೆಂಬುದು ಅವನ ಅಭಿಪ್ರಾಯವಲ್ಲ. ಮೊದಲನೇಸಾರಿ ಗೋವಿಂದ ಶ್ರೇಷ್ಠಿ ಸಮುದ್ರ ವ್ಯಾಪಾರಕ್ಕೆ ಕರೆದಾಗ, ಅವನಲ್ಲಿ ಗುಪ್ತವಾಗಿದ್ದ ತಾತಮುತ್ತಾತರ ಜೂಜಿನ ಮನಸ್ತತ್ವವು ಮೇಲಕ್ಕೆದ್ದಿತು. ಸಮುದ್ರ ವರ್ತಕದಲ್ಲಿ ಏಟು ತಿಂದುದರಿಂದ ಆ ಜೂಜಿನ ಮನಸ್ತತ್ವವು ಇನ್ನಿಷ್ಟು ಪ್ರಕೋಪಿಸಿತು. ಎಂತಹ ದುರದೃಷ್ಟವಂತನಾದರೂ ಕ್ರಮವಾಗಿ ಎರಡುಸಾರಿ ಏಟು ತಿನ್ನಲಾರ. ಆದುದರಿಂದ ರಂಗಯ್ಯ ಶ್ರೇಷ್ಠಿ ತನಗಿರುವುದನ್ನೆಲ್ಲಾ ಪಣಕ್ಕೆ ಒಡ್ಡಿ ಸಮುದ್ರ ವ್ಯಾಪಾರದೊಂದಿಗೆ ಜೂಜಾಡಿದನು. ಲಾಭ ಬಂದಿತು. ಅದರೊಂದಿಗೇ ರಂಗಯ್ಯ ಶ್ರೇಷ್ಠಿ ಎಂದಿನಂತಾದನು. ಅವನ ಮನಸ್ತತ್ವಕ್ಕೆ ಜೂಜಾಟ ಸೇರದು. ಆದುದರಿಂದ ಮತ್ತೆ ವ್ಯವಸಾಯಕ್ಕೇ ಅಂಟಿಕೊಂಡನು.

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡ ತೊಡಗಿತು.





# ಗಂಡಂದಿರ ಅಡಿಗೆ

ಹಿರಿಯೂರಿನಲ್ಲಿ ಪ್ರತಿ ಶನಿವಾರವೂ ಸಂತೆ ನಡೆಯುತ್ತಿದ್ದಿತು. ಒಂದಾನೊಂದು ಶನಿವಾರದ ಸಂತೆಯಲ್ಲಿ ಈಚೆಯ ಊರಿನ ಭೀಮಯ್ಯನೂ ಆಚೆಯ ಊರಿನ ರಾಮಯ್ಯನೂ ಆಕಸ್ಮಾತ್ತಾಗಿ ಸಂಧಿಸಿದರು. ಅವರಿಬ್ಬರೂ ಒಂದೇ ಗ್ರಾಮದಲ್ಲಿ ಹುಟ್ಟಿ ಬೆಳೆದ ಬಾಲ್ಯಮಿತ್ರರು. ಮದುವೆಯಾಗಿ ಸಂಸಾರ ನಡೆಸಲು ಪ್ರಾರಂಭಿಸಿದ ಮೇಲೆ ಇಬ್ಬರೂ ಬೇರೆ ಬೇರೆ ಊರುಗಳಲ್ಲಿ ಸಂಪಾದನೆಗಿಳಿದು ಅಲ್ಲಿಯೇ ಸ್ಥಿರಪಟ್ಟವರು. ಅನೇಕ ವರ್ಷಗಳ ಮೇಲೆ ಈ ಸಂತೆಯಲ್ಲಿ ಕಲೆತುಕೊಂಡರು. ಬಹಳ ಹೊತ್ತು ಒಬ್ಬರ ಸಂಗತಿ ಒಬ್ಬರೊಂದಿಗೆ ಹೇಳಿಕೊಂಡರು. ಭೀಮಯ್ಯನು ಚಿಕ್ಕ ರೀತಿಯಲ್ಲಿ ವ್ಯಾಪಾರಮಾಡಿಕೊಂಡಿದ್ದನು. ಅವನ ಹೆಂಡತಿ ಶಾಂತಮ್ಮ. ಅವರಿಗೆ ಮದುವೆಯ ವಯಸ್ಸಿಗೆ ಬಂದ ಒಬ್ಬ ಮಗನಿದ್ದನು. ರಾಮಯ್ಯನು ಬೇಸಾಯ ಮಾಡುತ್ತ ಹೊಟ್ಟೆ ತುಂಬಿಸಿಕೊಂಡಿದ್ದನು. ಅವನ ಹೆಂಡತಿಯ ಹೆಸರು ಸೀತಮ್ಮ. ಇವರಿಗೆ ಕೂಡಾ ಮದುವೆಯ ವಯಸ್ಸಿಗೆ ಬಂದ ಮಗಳೊಬ್ಬಳಿದ್ದಳು.

ಈ ವಿಧವಾಗಿ ಆ ಸ್ನೇಹಿತರಿಬ್ಬರೂ ಬೇರೆ ಬೇರೆ ಊರುಗಳಲ್ಲಿ ಬೇರೆ ಬೇರೆ ಕೆಲಸಗಳಲ್ಲಿ ಬದುಕಿಕೊಂಡಿದ್ದರೂ ಒಂದು ವಿಷಯದಲ್ಲಿ ಮಾತ್ರ ಇಬ್ಬರಿಗೂ ಹೋಲಿಕೆಯಿದ್ದಿತು. ಅದೇನಂದರೆ ಇಬ್ಬರ ಹೆಂಡತಿಯರೂ ಸೋಮಾರಿಗಳು. ಇಬ್ಬರೂ ಗಂಡನಿಗೂ ಮಕ್ಕಳಿಗೂ ಅಡಿಗೆಮಾಡಿ ಬಡಿಸುವವರಲ್ಲ. ಅಂದರೆ ಅವರಿಗೆ ಅಡಿಗೆಮಾಡಲು ಬರುವುದಿಲ್ಲವೆಂದಲ್ಲ. ಉದಾಸೀನದವರಾದುದರಿಂದ ಅಡಿಗೆಯ ಮೇಲೆ ಶ್ರದ್ಧೆಯಿಲ್ಲ. ಅನ್ನವನ್ನು ಮುದ್ದೆಮಾಡಿಬಿಡುತ್ತಾರೆ. ಪಲ್ಯವನ್ನು ಅಡಿ ಹೊತ್ತಿಸಿಬಿಡುತ್ತಾರೆ. ಹೀಗೆ ಏನೋ ಒಂದು. ಇಂತಹ ಅವರ ಅಡಿಗೆಯನ್ನು ಊಟಮಾಡಲು ಸಾಧ್ಯವಾಗದು. ಅವರು ಅಡಿಗೇ ಮಾಡಿದ ದಿವಸ ಮನೆಯವರಿಗೆ ಉಪವಾಸವೇ ಸರಿ. ಆದುದರಿಂದ ಆ ಇಬ್ಬರ ಗಂಡಂದಿರೂ ತಾವೇ ಅಡಿಗೆಯನ್ನೂ ಮಾಡಿ, ಇತರ ಕೆಲಸಗಳನ್ನೂ ನೋಡಿಕೊಳ್ಳುತ್ತಿದ್ದರು.

ಈ ರೀತಿಯಾಗಿ ಇಬ್ಬರು ಮಿತ್ರರೂ ತಮ್ಮ ತಮ್ಮ ಸಂಗತಿಗಳನ್ನು ಹೇಳಿಕೊಂಡ ಮೇಲೆ, ತಮ್ಮ ಹೆಂಡಂದಿರ ಉದಾಸೀನತೆಯನ್ನು ಒಡೆದು ಹಾಕಿ ಅವರಿಂದ ಒಳ್ಳೆಯ ರೀತಿಯಲ್ಲಿ ಅಡಿಗೆ ಮಾಡಿಸಲು ಒಳ್ಳೆಯ ಉಪಾಯವನ್ನು ಹುಡುಕಿಕೊಂಡರು.

ವಿ. ಎಸ್. ನಾರಾಯಣ



ಆದರಂತೆ ಇಬ್ಬರೂ ತಮ್ಮೊಳಗೆ ಒಂದು ಪಥಕವನ್ನು ಹಾಕಿ ಕಾರ್ಯಗತಗೊಳಿಸಲು ಸಿದ್ಧರಾದರು. ಭೀಮಯ್ಯನು ಶ್ರೀಮಂತನ ಹಾಗೆ ದುಸ್ತು ಹಾಕಿಕೊಂಡನು. ಆ ಮೇಲೆ ರಾಮಯ್ಯನ ಮನೆಗೆ ಭೀಮಯ್ಯನೂ, ಭೀಮಯ್ಯನ ಮನೆಗೆ ರಾಮಯ್ಯನೂ ಹೋದರು. ಮಿತ್ರರ ಹೆಂಡತಿಯರಿಗೆ ಇಬ್ಬರೂ ಪರಿಚಯ ಹೇಳಿಕೊಂಡರು.

ಆದಾದ ಮೇಲೆ ಒಂದು ಶನಿವಾರ ದಿನ ರಾಮಯ್ಯನು ಭೀಮಯ್ಯನ ಮನೆಗೆ ಹೋಗಿ ಶಾಂತಮ್ಮನೊಂದಿಗೆ, ಭೀಮಯ್ಯನನ್ನು ವಿಚಾರಿಸಿದನು. ಅವನು ಮನೆಯಲ್ಲಿಲ್ಲವೆಂದು ತಿಳಿದು, "ಭೀಂಬಾವ ಇದ್ದಾನೆಂದುಕೊಂಡು ಬಂದೆ. ಮದುವೇ ವಿಷಯ ಮಾತಾಡಲು ಇವತ್ತು ಒಳ್ಳೇ ದಿನವಾಗಿತ್ತು" ಎಂದನು.

ಆ ಮಾತು ಕೇಳಿ ಶಾಂತಮ್ಮನಿಗಾದ ಸಂತೋಷಕ್ಕೆ ಮೇರೆಯಿಲ್ಲ. ಅದಕ್ಕೆ ತಕ್ಕ ಹಾಗೆ ರಾಮಯ್ಯನು ನಗರದ ಶ್ರೀಮಂತನ ಹಾಗೆ ಬೆಲೆ ಬಾಳುವ ಬಟ್ಟೆಗಳನ್ನು ಧರಿಸಿದ್ದ. ಅಂತೆಯೇ ತನ್ನ ಮಗನಿಗೆ ಒಳ್ಳೆಯ ವರದಕ್ಷಿಣೆ ಬಂದು ಮದುವೆಯಾಗುವುದೆಂಬ ಆಶೆಯಿಂದ ಶಾಂತಮ್ಮ ರಾಮಯ್ಯನೊಂದಿಗೆ, ತನ್ನ ಗಂಡ ಸಂತೆಗೆ ಹೋಗಿದ್ದಾನೆಂದೂ, ಈಗ ಬರುತ್ತಾನೆಂದೂ ಹೇಳಿದಳು. ಆ ದಿನವಿಡೀ ಭೀಮಯ್ಯ ಬರಲಿಲ್ಲ. ಶಾಂತಮ್ಮ ಒಳ್ಳೆಯ ಅಡಿಗೆಮಾಡಿ ಅವನಿಗೆ ಉಪಚಾರದ ಊಟ ಹಾಕಿದಳು. ಮಾರನೇ ದಿನವೂ ಭೀಮಯ್ಯ ಮನೆಗೆ ಬರಲಿಲ್ಲ. "ಏನೋ ಕೆಲಸದ ಮೇಲೆ ಹೋಗಿರಬೇಕು. ನಾಳೆ ಖಂಡಿತಾ ಬರುತ್ತಾರೆ" ಎಂದಳು ಶಾಂತಮ್ಮ.

ಹೀಗೆ ನಾಲ್ಕು ದಿನಗಳಾದರೂ ಭೀಮಯ್ಯ ಮನೆಗೆ ಬರಲಿಲ್ಲ. ನಾಲ್ಕು ದಿನಗಳವರೆಗೆ ಶಾಂತಮ್ಮನ ಕೈಯಿಂದಾದ ಅಡಿಗೆಯ ದಿವ್ಯ ಭೋಜನ ಮಾಡಿದ ರಾಮಯ್ಯ. "ಇನ್ನೊಮ್ಮೆ ಬರುತ್ತೇನಮ್ಮ. ಮನೆಯಲ್ಲಿ ತುಂಬಾ ಕೆಲಸಬಿದ್ದಿದೆ" ಎಂದು ಹೇಳಿ ತನ್ನ ಊರಿಗೆ ಹಿಂದಿರುಗಿದನು. ಅವನು ಹೊರಟುಹೋದ ಮಾರಣೇ ದಿನ ಭೀಮಯ್ಯ ಮನೆಗೆ ಬಂದ.

ಭೀಮಯ್ಯ ಆ ನಾಲ್ಕು ದಿನಗಳೂ ರಾಮಯ್ಯನ ಮನೆಯಲ್ಲಿದ್ದ. ರಾಮಯ್ಯನ ಹೆಂಡತಿ ಸೀತಮ್ಮ ತನ್ನ ಉದಾಸೀನತೆಯನ್ನು ಬಿಟ್ಟು ಭೀಮಯ್ಯನಿಗೆ ದಿವ್ಯವಾದ ಅಡಿಗೆಮಾಡಿ ಊಟ ಹಾಕಿದಳು. ಅವನು ಕೂಡಾ ರಾಮಯ್ಯನ ಬರುವಿಕೆಯನ್ನು ಕಾದಂತೆ ನಟಿಸಿ ಅವಸರದ ಕೆಲಸವಿದೆಯೆಂದು ಹೇಳಿ ಹೊರಟು ಬಂದಿದ್ದನು.

ಇಬ್ಬರೂ ಅವರವರ ಮನೆಗೆ ಹಿಂದಿರುಗಿ ಬಂದು ತಮ್ಮ ಆಲಸ್ಯಕ್ಕೆ ಏನೋ ಕಾರಣಗಳನ್ನು ಹೇಳಿದರು. ಅವರಿಬ್ಬರೂ ಮದುವೆಯ ವಿಷಯವನ್ನೇ ಮಾತಾಡಲಿಕ್ಕೆ ಬಂದರೆಂದು ತಮ್ಮ ತಮ್ಮ ಹೆಂಡತಿಯರಿಂದ ತಿಳಿದುಕೊಂಡರು. ಆಮೇಲೆ ಇಬ್ಬರನ್ನೂ ಅವರವರ ಹೆಂಡತಿಯರು ಅವಸರಪಡಿಸಿ, ಮದುವೆಯನ್ನು

ನಿರ್ಣಯಿಸಿಕೊಂಡು ಬರುವಂತೆ ಹೇಳಿ ಕಳುಹಿಸಿದರು. ಭೀಮಯ್ಯ, ರಾಮಯ್ಯರು ಒಂದು ಕಡೆಯಲ್ಲಿ ಕೂಡಿಕೊಂಡು ತಮ್ಮ ಪಥಕವು ಎಷ್ಟು ಚೆನ್ನಾಗಿ ಸಾಗಿತೆಂದೂ, ತಮ್ಮ ಹೆಂಡತಿಯರು ಎಷ್ಟು ಉತ್ಸಾಹವಾಗಿ ಅಡಿಗೆಮಾಡುವರೆಂದೂ ತಿಳಿದುಕೊಂಡು ಸಂತೋಷಪಟ್ಟು, ಮುಂದೆ ಮಾಡಬೇಕಾದ ಕೆಲಸವನ್ನು ಕುರಿತು ಚರ್ಚಿಸಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.

ತನ್ನ ಗಂಡ ಮನೆಗೆ ಬಂದ ಕೂಡಲೇ ಶಾಂತಮ್ಮ "ಏನಾಯಿತು? ಮದುವೇ ವಿಷಯ ಒಂದು ನಿಶ್ಚಯಕ್ಕೆ ಬಂತೆ?" ಎಂದು ಆತುರದಿಂದ ಕೇಳಿದಳು.

ಭೀಮಯ್ಯ ಕೋಪವನ್ನು ನಟಿಸುತ್ತ "ಅವರು ಎಷ್ಟು ಶ್ರೀಮಂತರಾದರೂ ನಮಗೇನಾಯತು? ಇಷ್ಟೊಂದು ಗರ್ವ ಒಳ್ಳೆಯದಲ್ಲ. ಈ ಸಂಬಂಧದ ಆಸೆ ಬಿಡು!" ಎಂದನು.

"ಏಕೆ? ಏನಾಯಿತು?" ಎಂದು ಶಾಂತಮ್ಮ ಕೇಳಿದಳು. "ಇನ್ನೇನಾಗಬೇಕು? ಅವರ ಮಗಳು ಅಡಿಗೆ ಮಾಡಲಾರಳಂತೆ. ಮದುವೆಯಾದ ಮೇಲೆ ನಮ್ಮ ಹುಡುಗನೇ ಆ ಹುಡಿಗೀರಾಣಿಗೆ ಅಡಿಗೇ ಮಾಡಿ ಹಾಕಬೇಕಂತೆ!" ಎಂದ ಭೀಮಯ್ಯ.

"ನಮ್ಮ ಹುಡುಗ ಅಡಿಗೆ ಮಾಡೋದೇ? ಅನ್ಯಾಯ! ನಗೆಗೇಡು!" ಎಂದಳು ಶಾಂತಮ್ಮ.

"ನಮ್ಮ ಮನೇಲಿ ನಾನೇ ಅಡಿಗೆ ಮಾಡೋದು ಅಂತ ಆ ರಾಮಯ್ಯನಿಗೆ ಯಾರೋ ಹೇಳಿದ್ದಾರೆ ಅಂತ ಕಾಣುತ್ತೆ. ಅವರ ಮನೆಯಲ್ಲಿ ಕೂಡಾ ಹೆಂಗುಸರು ಅಡಿಗೆ ಮಾಡೋದಿಲ್ಲಂತೆ" ಎಂದ ಭೀಮಯ್ಯ.

ತನ್ನ ಮೂಲಕವಾಗಿ ತನ್ನ ಮಗನಿಗೆ ಒಳ್ಳೆಯ ಸಂಬಂಧ ತಪ್ಪಿಹೋಗುವುದೆಂದು ತಿಳಿದು ಶಾಂತಮ್ಮ ತಳಮಳಿಸುತ್ತ, "ಯಾವಾಗಾದರೂ ನನಗೆ ಸುಸ್ತೀ ಆದಾಗ ಮಾತ್ರ ಹೊರತು ಮನೆಯಲ್ಲಿ ಅಡಿಗೇ ಮಾಡೋದು ನಾನೇ ಅಂತ ಅವರನ್ನು ಹೇಗಾದರೂ ಒಪ್ಪಿಸಿಬಿಡಿ. ಅವರಿದ್ದಾಗ ನಾನೇ ಅಡಿಗೇ ಮಾಡಿದೆ ನ್ನಲ್ಲಾ!" ಎಂದಳು ಪ್ರಾರ್ಥಿಸುವಂತೆ.



"ನಿನ್ನದೊಂದು ಹುಚ್ಚುಮಾತು. ನಾನೇ ಇಲ್ಲಿ ಅಡಿಗೆ ಮಾಡೋದೂ ಅಂತ ಅವರು ನನ್ನ ಹತ್ತಿರ ಹೇಳಿದರೆಂದುಕೊಂಡಿಯಾ? ನಾನು ಹೋಗಿ ಕಳ್ಳ ಅನಿಸಿಕೊಳ್ಳಲಾಗದೆ ಹಗಲು ತಡವಿಕೊಳ್ಳಬೇಕೇನು? ಒಳ್ಳೆಯ ಸಂಬಂಧ ಹೋಯಿತು. ಕೈಸುಟ್ಟ ಮೇಲೆ ಬಟ್ಟೆ ಹಿಡಿದು ಪ್ರಯೋಜನವಿಲ್ಲ ಬಿಡು" ಎಂದು ಭೀಮಯ್ಯ ತನ್ನ ಹೆಂಡತಿಯ ಪಶ್ಚಾತ್ತಾಪವನ್ನು ಇನ್ನಷ್ಟು ಹೆಚ್ಚಿಸಿದನು.

ಇಷ್ಟರಲ್ಲಿ ಅಲ್ಲಿ ರಾಮಯ್ಯ ಕೂಡಾ ಬಾಡಿದ ಮುಖದಿಂದ ತನ್ನ ಮನೆಗೆ ಹೋಗಿ, "ಲಾಭವಿಲ್ಲ! ಈ ಸಂಬಂಧ ನಮಗೆ ಪ್ರಾಪ್ತಿಯಿಲ್ಲ" ಎಂದನು.

ಏನಾಯಿತೆಂದು ಸೀತಮ್ಮ ಕೇಳಲು, "ಮದುವೆಯಾದ ಕೂಡಲೇ ಅವರ ಮನೆಯ ಅಡಿಗೆಯವಳನ್ನೂ, ಕಸಮುಸುರೆಯವಳನ್ನೂ ತೊಲಗಿಸಿ ನಮ್ಮ ಹುಡುಗೀ ಕೈಯಿಂದಲೇ ಎಲ್ಲಾ ಕೆಲಸ ಮಾಡಿಸುತ್ತಾರಂತೆ. ನಮ್ಮ ಮನೆಯಲ್ಲಿ ಗಂಡುಸರೇ ಕೈ ಸುಟ್ಟುಕೊಳ್ಳುವುದು ಅಂತ ಅವರಿಗೆ ಗೊತ್ತಾದಹಾಗಿದೆ" ಎಂದ ರಾಮಯ್ಯ.

"ಅದೆಂಥ ಮಾತು? ನೀವೇ ಇಷ್ಟಪಟ್ಟು ಏನೋ ಕೆಲಸ ಮಾಡುತ್ತೀರಿ ಹೊರತು ನಾನು ಅಡಿಗೆ ಮಾಡಲಾರೆನೆಂದು ವ್ರತಹಿಡಿದಿದ್ದೇನೆಯೆ? ನೀವು ಮನೆಯಲ್ಲಿಲ್ಲದಾಗ ಹಬ್ಬದಡಿಗೆ ಎಲ್ಲಾ ಅವರಿಗೆ ಮಾಡಿ ಹಾಕಿದೆನೋ ಇಲ್ಲವೊ? ನಿಮ್ಮ ಸ್ನೇಹಿತರು ನನ್ನ ಕೈಯ ಅಡಿಗೆಯನ್ನು ನಾಲ್ಕು ದಿನ ಚೆನ್ನಾಗಿ ಉಂಡರಲ್ಲಾ?" ಎಂದಳು ಸೀತಮ್ಮ.

"ಹಾಗಾದರೆ ಈಗ ನನ್ನನ್ನು ಏನು ಮಾಡಲು ಹೇಳುತ್ತೀ?" ಎಂದು ರಾಮಯ್ಯ ಕೇಳಿದ. "ನಮ್ಮ ಹುಡುಗಿಯೇ ಅಡಿಗೆ ಮಾಡುತ್ತಾಳೆ, ಹುಡುಗಿಯರು ಅಡಿಗೇ ಮಾಡದೇ ಇರಬೇಕು ಅಂತ ಒಳ್ಳೇ ಸಂಬಂಧ ಬಿಟ್ಟುಬಿಡುತ್ತಾರೇನು? ಹೋಗಿ ಮುಹೂರ್ತ ಇಡಿಸಿಕೊಂಡು ಬನ್ನಿ" ಎಂದಳು ಸೀತಮ್ಮ ಗಂಡನಿಗೆ.

ರಾಮಯ್ಯ ಭೀಮಯ್ಯನ ಮನೆಗೆ ಬಂದು, "ನಮ್ಮ ಹುಡುಗಿ ಅಡಿಗೆ ಮುಂತಾದ್ದೆಲ್ಲಾ ತಾನೇ ಮಾಡುತ್ತಾಳಂತೆ. ಮುಹೂರ್ತವಿಟ್ಟು ನಿಶ್ಚಿತಾರ್ಥ ಮಾಡೋಣವೆ?" ಎಂದುದನ್ನು ಕೇಳಿ ಶಾಂತಮ್ಮನಿಗೆ ತುಂಬಾ ಸಮಾಧಾನವಾಯಿತು. ರಾಮಯ್ಯ ನಿಶ್ಚಿತಾರ್ಥ ಮುಹೂರ್ತಗಳನ್ನೆಲ್ಲ ನಿರ್ಣಯಿಸಿಕೊಂಡು ಬಂದ ಸಮಾಚಾರ ಕೇಳಿ ಸೀತಮ್ಮ "ಬದುಕಿದೇ ಸದ್ಯ! ಇನ್ನು ಎಂದಿಗೂ ಗಂಡುಸಿನ ಕೈಯಿಂದ ಅಡಿಗೆ ಮಾಡಿಸಿಕೊಳ್ಳಲಾರೆನಪ್ಪ!" ಎಂದು ಆಣೆ ಹಾಕಿಕೊಂಡಳು.

ತೀರಾ ಮದುವೆಯಾದ ಮೇಲೆಯೇ ಎರಡು ಕುಟುಂಬಗಳೂ ಅಷ್ಟೇನೂ ದೊಡ್ಡ ಶ್ರೀಮಂತಿಕೆಯದಲ್ಲವೆಂದು ಇಬ್ಬರು ಹೆಂಗುಸರಿಗೂ ತಿಳಿಯಿತು. ಅಂತೂ ಭೀಮಯ್ಯನಾಗಲಿ, ರಾಮಯ್ಯನಾಗಲಿ ಮತ್ತೆ ಸೌಟು ಹಿಡಿಯಲಿಲ್ಲ.



# ದುಷ್ಟ ಭಾವನೆಯ ದುಷ್ಫಲಿತ

**ಕ**ರಟಕ ಶಾಸ್ತ್ರಿ ಹಾವಿನ ವಿಷಕ್ಕೆ ಮಂತ್ರ ಹಾಕುವುದರಲ್ಲಿ ಅಖಂಡನಾಗಿದ್ದನು. ಅದರಂತೆ ದಮನಕ ಶಾಸ್ತ್ರಿ ಪಕ್ಷವಾತವನ್ನು ಗುಣಪಡಿಸುವುದರಲ್ಲಿ ಅದ್ಭುತ ಪ್ರಜ್ಞೆಯುಳ್ಳವನು.

ಆದರೆ ಅವರಿಬ್ಬರೂ ಸಂಕುಚಿತ ಭಾವನೆಯವರು. ಸಣ್ಣ ದೃಷ್ಟಿಯುಳ್ಳವರು. ಈ ಪ್ರತ್ಯೇಕ ವಿದ್ಯೆಗಳಿಂದ ಇಬ್ಬರೂ ಅಪಾರ ಹಣ ಸಂಪಾದನೆ ಮಾಡಿ, ಎಲ್ಲಿಯೋ ರಹಸ್ಯವಾಗಿ ಅಡಗಿಟ್ಟರು. ಹಾಗೆಯೇ ತಮ್ಮ ಜ್ಞಾನವನ್ನು ಅದಕ್ಕಿಂತ ರಹಸ್ಯವಾಗಿ ತಮ್ಮ ಮನಸ್ಸಿನಲ್ಲೇ ಅಡಗಿಸಿಕೊಂಡಿದ್ದರು. ವಾರ್ಧಕ್ಯವು ತಮ್ಮ ಮೇಲೆ ಬಿದ್ದರೂ ಅದನ್ನು ಯಾರಿಗೂ ಹೇಳಿಕೊಡಲಿಲ್ಲ. ಅವರ ಹತ್ತಿರ ಶಿಷ್ಯತ್ವ ಮಾಡಲು ಅನೇಕರು ಬಂದಿದ್ದರು. ತಮ್ಮ ಪ್ರತ್ಯೇಕವಾದ ವಿದ್ಯೆಯನ್ನು ಯಾರಿಗೂ ಕಲಿಸಿಕೊಡದೆ, ಸಾಯುವುದರೊಳಗೆ ತಮ್ಮ ಮಕ್ಕಳಿಗೇ ಹೇಳಿಕೊಡುವೆವೆನ್ನುತ್ತಾ ಕಾಲ ಕಳೆಯುತ್ತಿದ್ದರು.

ಒಂದು ದಿನ ಬೆಳಿಗ್ಗೆ ದಮನಕ ಶಾಸ್ತ್ರಿಯನ್ನು ಹಾವು ಕಡಿಯಿತು. ಅವನು ಮನೆಗೆ ಬಂದು ನಾಗರಹಾವು ಕಡಿಯಿತೆಂದು ಮಗನೊಂದಿಗೆ ಹೇಳಿ, ಮತ್ತೇನೂ ಹೇಳಲಾಗದೆ ನೊರೆ ಕಕ್ಕುತ್ತ ಸ್ಮೃತಿ ತಪ್ಪಿಬಿದ್ದನು.

ಅವನ ಮಗನು ಕರಟಕ ಶಾಸ್ತ್ರಿಯ ಬಳಿಗೆ ಓಡಿದನು. ಕರಟಕ ಶಾಸ್ತ್ರಿಯ ಹಾವಿನ ಮಂತ್ರದಿಂದ ತನ್ನ ತಂದೆಯನ್ನು ಬದುಕಿಸುವ ಆಶೆಯಿಂದಿದ್ದನು.

ಅದೇ ಸಮಯದಲ್ಲಿ ಕರಟಕ ಶಾಸ್ತ್ರಿ ಪಕ್ಷವಾತದಿಂದ ಕೈಕಾಲು ನಾಲಿಗೆಗಳೆಲ್ಲ ಬಿದ್ದುಹೋಗಿ ತೇಲುಗಣ್ಣು ಮೇಲುಗಣ್ಣು ಹಾಕಿಕೊಂಡಿದ್ದ!





# ಸ್ನೇಹದ ಬೆಲೆ

ಚಂದ್ರಸೇನನೆಂಬ ಯುವರಾಜನು ಮಗಧದ ಸಿಂಹಾಸನವನ್ನೇರಿದನೆಂಬ ಸಮಾಚಾರ, ಅವನ ನಾಲ್ಕು ಮಂದಿ ಮಿತ್ರರಿಗೆ ಗೊತ್ತಾಯಿತು. ಚಂದ್ರಸೇನನು ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುವಾಗ ಆ ನಾಲ್ಕು ಮಂದಿ ಬಡವರೂ ಅವನೊಂದಿಗೆ ಸಹಾಧ್ಯಾಯಿಗಳಾಗಿದ್ದರು. ಅವರು ಚಂದ್ರಸೇನನ ದರ್ಶನಕ್ಕೆ ಬಂದು, ತಮಗೆ ಸಹಾಯಮಾಡಬೇಕೆಂದು ಕೇಳಿಕೊಂಡರು.

ಚಂದ್ರಸೇನನು ಅವರನ್ನು ಆದರಿಸಿ, "ಒಳ್ಳೆಯದು. ನಿಮಗೆ ಉದ್ಯೋಗವು ಬೇಕೆ? ಧನಸಹಾಯ ಮಾಡಬೇಕೆ? ಹೊಲಗದ್ದೆಗಳು ಬೇಕೆ?" ಎಂದು ಕೇಳಿದನು. "ನನಗೆ ಧನ ಕೊಟ್ಟರೇ ಒಳ್ಳೆಯದು." ಎಂದನು ಒಬ್ಬ. ಚಂದ್ರಸೇನನು ಅವನಿಗೆ ಕೇಳಿದಷ್ಟು ಧನವನ್ನು ಕೊಟ್ಟು ಕಳುಹಿಸಿದನು.

ಎರಡನೆಯವನು ಏನಾದರೂ ಉದ್ಯೋಗ ಕೊಡಿಸಿದರೆ ಸುಖವಾಗಿದ್ದೇನು" ಎಂದನು. ಚಂದ್ರಸೇನನು ಅವನಿಗೆ ಒಳ್ಳೆಯ ಉದ್ಯೋಗವನ್ನು ಕೊಡಿಸಿದನು.

"ನನಗೆ ವ್ಯವಸಾಯಮಾಡಲಿಕ್ಕೆ ಚೆನ್ನಾಗಿ ಗೊತ್ತಿದೆ. ಸ್ವಲ್ಪ ಹೊಲ ಗದ್ದೆಗಳನ್ನು ಕೊಡಿಸಿದರೆ ವ್ಯವಸಾಯಮಾಡುತ್ತ ಸುಖವಾಗಿರಬಲ್ಲೆ" ಎಂದನು ಮೂರನೇ ಮಿತ್ರ. ಚಂದ್ರಸೇನನು ಹಾಗೆಯೇ ಕೊಡಿಸಿ ಅವನನ್ನು ಕಳುಹಿಸಿದನು.

ನಾಲ್ಕನೆಯವನು, "ನನಗೆ ನಿಮ್ಮ ಸ್ನೇಹದ ಹೊರತು ಬೇರೇನೂ ಬೇಡ. ಅದೊಂದಿದ್ದರೆ ಅಷ್ಟೈಶ್ವರ್ಯಗಳೂ ಇದ್ದ ಹಾಗೆ. ಒಳ್ಳೆಯ ಸ್ನೇಹಿತನಿಂದ ರಾಜನಿಗೆ ಲಾಭವೂ ಇದೆ." ಎಂದನು.

ವೀರದಾಸನೆಂಬ ಆ ಮಿತ್ರನು ಗುರುಕುಲದಲ್ಲಿದ್ದಾಗಲೂ ಏನೇನೋ ಹೊಸ ಮಾತುಗಳನ್ನು ಹೇಳಿ ಆಶ್ಚರ್ಯಪಡಿಸಿಕೊಂಡಿದ್ದನು. ಈಗಲೂ ಹಾಗೆಯೇ! ಅದು ಹೇಗೆ ಜೀವನದಲ್ಲಿ ಅಭಿವೃದ್ಧಿಗೇರುವನೋ ನೋಡಿಬಿಡೋಣವೆನಿಸಿ ಚಂದ್ರಸೇನನು ಅವನ ಕೋರಿಕೆಗೆ ಸಮ್ಮತಿಕೊಟ್ಟನು.

ಚಂದ್ರಸೇನನು ದಿನಾ ಸಾಯಂಕಾಲ ರಾಜಬೀದಿಯಲ್ಲಿ ಉದ್ಯಾನದ ಕಡೆಗೆ ಹೋಗುವಾಗ ವೀರದಾಸನನ್ನು ಕೂಡಾ ತನ್ನೊಂದಿಗೆ ರಥದಲ್ಲೇರಿಸಿಕೊಂಡು ಹೋಗುತ್ತಿದ್ದನು. ಆಗ ವೀರದಾಸನು ರಾಜನಿಗೆ ತುಂಬಾ ಸನ್ನಿಹಿತನೆಂಬ ಸಂಗತಿ ಪುರಪ್ರಮುಖರಿಗೂ ವರ್ತಕರಿಗೂ ಗೊತ್ತಾಯಿತು.

ವಿ. ವೆಂಕಟಯ್ಯ

ಒಂದು ದಿನ ರಾಜನೊಂದಿಗೆ ಹೋಗುತ್ತಿದ್ದ ವೀರ ದಾಸನು, ವರ್ತಕರು ಸೇರುವ ಸಂಗಮ ಸ್ಥಳದಲ್ಲಿ ರಥವನ್ನು ನಿಲ್ಲಿಸಿ, ತನಗೆ ಅಲ್ಲಿ ಸ್ವಲ್ಪ ಕೆಲಸವಿದೆ ಎಂದು ಹೇಳಿ ರಥದಿಂದಿಳಿದು ಅತ್ತ ಹೋದನು.

ಕೂಡಲೇ ಅಲ್ಲಿದ್ದ ದೊಡ್ಡ ದೊಡ್ಡ ವರ್ತಕರೆಲ್ಲ ಅವನಿಗೆ ನಮಸ್ಕಾರಮಾಡಿ ಕೈಕಟ್ಟಿ ತುಂಬಾ ಮರ್ಯಾದೆ ತೋರಿಸಿ, ತಮ್ಮಿಂದೇನಾಗಬೇಕೆಂದು ವಿನಯದಿಂದ ಕೇಳಿದರು. ಮಹಾರಾಜರ ಅಂತರಂಗದ ಆಲೋಚನೆಯಲ್ಲಿ ವ್ಯಾಪಾರ ತೆರಿಗೆಯ ವಿಷಯ ಬಂತೆಂದೂ, ಈಗಿನ ತೆರಿಗೇ ವಿಷಯದಲ್ಲಿ ಪ್ರಜೆಗಳ ಅಭಿಪ್ರಾಯ ಹೇಗಿದೆಯೆಂಬುದರಲ್ಲಿ ಅಭಿಪ್ರಾಯ ಭೇದ ಉಂಟಾದ್ದರಿಂದ, ನೋಡೋಣವೆಂದು ಹೀಗೇ ಬಂದೆನೆಂದೂ ವೀರದಾಸನು ಹೇಳುತ್ತ, ಮುಖ್ಯವಾಗಿ ವ್ಯಾಪಾರಸ್ಥರ ಮೇಲೆ ಹೆಚ್ಚಿನ ತೆರಿಗೆ ಬೀಳಬಹುದೆಂದೂ ಸೂಚನೆ ಮಾಡಿದ.



ಅದನ್ನು ಕೇಳಿ ವರ್ತಕರು, ತಮ್ಮ ಮೇಲೆ ಹೆಚ್ಚಿನ ತೆರಿಗೆ ಬೀಳದಹಾಗೆ ನೋಡಿಕೊಳ್ಳಬೇಕೆಂದು ಪ್ರಾರ್ಥಿಸಿ, ಅವರವರ ಶಕ್ತಿಗೆ ತಕ್ಕ ಹಾಗೆ ವೀರದಾಸನಿಗೆ ಕಾಣಿಕೆಗಳನ್ನು ಕೊಟ್ಟು ಉಪಚರಿಸಿದರು.

ವೀರದಾಸನು ಹಾಗೆಯೇ ಮಾಡುವೆನೆಂದು ಹೇಳಿ ಅಲ್ಲಿಂದ ಹೊರಟನು. ಆಗಿನಿಂದ ಅವನು ಆಗಾಗ ವ್ಯಾಪಾರಿಗಳ ಮುಂದೆಯೂ, ಪುರ ಪ್ರಮುಖರ ಮುಂದೆಯೂ ಕಾಣತೊಡಗಿದನು. ವ್ಯಾಪಾರಿಗಳು ಪ್ರತಿವಾರಕ್ಕೆ ಒಂದುಸಾರಿ ತಮಗೆ ಬರುವ ಲಾಭದಲ್ಲಿ ಸ್ವಲ್ಪ ಭಾಗವನ್ನು ಅವನಿಗೆ ಕೊಡುತ್ತ ಬಂದರು. ಎಂದಿನಂತೆ ಅವನು ರಾಜನೊಂದಿಗೂ ಆಗಾಗ ಕಾಣಿಸುತ್ತಿದ್ದ. ಬೇಗದಲ್ಲೇ ವೀರದಾಸನು ಅಪಾರ ಧನವಂತನಾಗಿಬಿಟ್ಟನು.

ವರ್ತಕರ ಲೆಕ್ಕಗಳನ್ನು ತನಿಖೆಮಾಡುವ ಅಧಿಕಾರಿಯೂ, ನ್ಯಾಯಾಧಿಕಾರಿಯೂ ಈ ರಹಸ್ಯ ಕಾರ್ಯದಲ್ಲಿ ಸೇರಿದವರೇ ಆಗಿ, ವೀರದಾಸನ ಕೈಯಿಂದ ಆಗಾಗ, ತಮ್ಮ ಪಾಲನ್ನು ಪಡೆಯುವರು.

ಮತ್ತೊಂದು ವರ್ಷದೊಳಗೆ ವೀರದಾಸನು ರಾಜಧಾನಿಯಲ್ಲೇ ಅದ್ಭುತವಾದ ಭವನವನ್ನು ನಿರ್ಮಿಸಿ, ಗೃಹಪ್ರವೇಶಕ್ಕೆ ರಾಜನನ್ನೂ, ಮಂತ್ರಿಯನ್ನೂ, ದೊಡ್ಡ ದೊಡ್ಡ ರಾಜೋದ್ಯೋಗಿಗಳನ್ನೂ, ವರ್ತಕ ಪ್ರಮುಖರನ್ನೂ ಆಹ್ವಾನಿಸಿದನು. ಆಗ ನಡೆದ ನೃತ್ಯಗಾನ ವೈಭವಗಳು, ದೇವೇಂದ್ರನ ವೈಭವಗಳನ್ನು ನೆನಪಿಗೆ ತಂದುವು.

ರಾಜನು ವೀರದಾಸನೊಂದಿಗೆ, "ಇಷ್ಟು ಸ್ವಲ್ಪ ಕಾಲದೊಳಗೆ ನೀನು ಇಷ್ಟು ಧನಿಕನಾದುದು ಹೇಗೆಂದು ಹೇಳುವಿಯಾ?" ಎಂದು ಕೇಳಿದನು.

"ಮಹಾರಾಜಾ! ನಿಮ್ಮ ಸ್ನೇಹವಿದ್ದರೆ ರಾಜ್ಯಗಳನ್ನೇ ಸಂಪಾದಿಸಬಹುದು." ನಾಳೆ ರಾತ್ರಿ ನೀವು ರಹಸ್ಯವಾಗಿ ನನ್ನ ಕೋಣೆಗೆ ಬಂದು, ಅಡಗಿ ಕುಳಿತು ಇಲ್ಲಿ ನಡೆಯುವ ವ್ಯವಹಾರವನ್ನು ನೋಡಿರಿ.

ಆಮೇಲೆ ನೀವು ಪಡೆಯುವ ಲಾಭವನ್ನೂ ತೋರಿಸುತ್ತೇನೆ " ಎಂದ ವೀರದಾಸ.

ಮಾರನೇದಿನ ವೀರದಾಸನು ತನಿಖೀದಾರನಿಗೂ, ನ್ಯಾಯಾಧಿಕಾರಿಗೂ ಅವರಿಬ್ಬರ ಮೇಲಿನ ಒಂದು ಗಾಳೀ ಸಮಾಚಾರ ತಲಪುವಹಾಗೆ ಮಾಡಿದನು.

ಆದಿನ ರಾತ್ರಿ ವೀರದಾಸನ ಮನೆಗೆ ಚಂದ್ರಶೇಖರ ರಾಜನು ಬಂದು ಪಕ್ಕದ ಕೋಣೆಯಲ್ಲಿ ರಹಸ್ಯವಾಗಿ ಕುಳಿತಿದ್ದನು. ಸ್ವಲ್ಪಹೊತ್ತಿಗೆ ತನಿಖೀದಾರನು ಬಂದು. ವೀರದಾಸನೊಂದಿಗೆ. " ನನಗೆ ನಿಮ್ಮಿಂದ ಒಂದು ಉಪಕಾರವಾಗಬೇಕಿತ್ತು. ಆದ್ದರಿಂದ ಈಸಾರಿ ನನಗೆ ನೀವು ಕೊಡಬೇಕಾದ ಭಾಗವನ್ನು ನೀವೇ ಇಟ್ಟುಕೊಂಡು ಬಿಡಿ " ಎಂದನು.

" ಏನು ಉಪಕಾರವಾಗಬೇಕಿತ್ತು ? " ಎಂದು ವೀರದಾಸನು ಕೇಳಿದನು. ನಾನು ಶ್ರದ್ಧೆಯಿಂದ ಕೆಲಸಮಾಡುವುದಿಲ್ಲವೆಂದು ಮಹಾರಾಜರ ಹತ್ತಿರ ಯಾರೋ ದೂರು ಹೇಳಿದ್ದಾರೆಂದು ಕಾಣುತ್ತದೆ. ಅವರು ನನ್ನನ್ನು ತೊಲಗಿಸಿ ಇನ್ನೊಬ್ಬರನ್ನು ನಿಯಮಿಸಲಿರುವರೆಂದು ಗೊತ್ತಾಗಿದೆ. ನೀವು ಮಹಾರಾಜರೊಂದಿಗೆ ನಾನು ಅಂಥವನಲ್ಲವೆಂದು ಹೇಳಿ ನನ್ನ ಉದ್ಯೋಗವನ್ನು ಗಟ್ಟಿಪಡಿಸಬೇಕು " ಎಂದನು ತನಿಖೀದಾರ.

" ಹಾಗೆಯೇ ಮಾಡುತ್ತೇನೆ. ನೀವೇನೂ ಹೆದರಬೇಡಿ " ಎಂದು ವೀರದಾಸನು ಹೇಳಿ ಅವನನ್ನು ಕಳುಹಿಸಿಕೊಟ್ಟನು.

ಮತ್ತೆ ಸ್ವಲ್ಪ ಹೊತ್ತಿನ ಮೇಲೆ ನ್ಯಾಯಾಧಿಕಾರಿ ವೀರದಾಸನ ಬಳಿಗೆ ಬಂದು. " ಈಸಾರಿಯು ನನ್ನ ಭಾಗ ನೀವೇ ಇಟ್ಟುಕೊಂಡು. ಒಂದು ಉಪಕಾರ ಮಾಡಿ. ರಾಜನು ನನ್ನನ್ನು ಯಾವುದೋ ಹಳ್ಳಿಗೆ ವರ್ಗಾಯಿಸುತ್ತಾನಂತೆ. ದೊಡ್ಡದೊಡ್ಡ ವರ್ತಕರಿಲ್ಲದ ಜಾಗದಲ್ಲಿ ನನಗೇನು ಸಂಪಾದನೆಯಾದೀತು ಹೇಳಿ ? " ಎಂದನು.

ಹಾಗೇ ಆಗಲೆಂದು ಹೇಳಿ ವೀರದಾಸನು ಅವನನ್ನು ಕಳುಹಿಸಿಕೊಟ್ಟನು. ಆಮೇಲೆ ರಾಜನ ಬಳಿಗೆ ಹೋಗಿ, " ನೋಡಿದಿರಲ್ಲವೇ ಮಹಾರಾಜರೆ ! ನಿಮ್ಮ ಸ್ನೇಹದಿಂದ ನಾನು ಲಂಚದಾತರನ್ನೆಲ್ಲಾ ಆಯಸ್ಕಾಂತದ ಹಾಗೆ ಆಕರ್ಷಣೆ ಮಾಡಿದ್ದೇನೆ. ನಿಮ್ಮ ಪರಿಪಾಲನೆಯಲ್ಲಿ ಲಂಚಗುಳಿಗಳಿಗೆ ಸ್ಥಾನವಿಲ್ಲದಂತೆ ಮಾಡಲು ನನ್ನ ಸ್ನೇಹ ನಿಮಗೆ ಉಪಯೋಗವಾಗುತ್ತದೋ ಇಲ್ಲವೋ ? " ಎಂದನು.

ಚಂದ್ರಸೇನ ರಾಜನು ಆ ಮಾತನ್ನು ಒಪ್ಪಿ, ಏನೋ ಒಂದು ನೆಪನದಿಂದ. ತನಿಖೀದಾರನನ್ನೂ, ನ್ಯಾಯಾಧಿಪತಿಯನ್ನೂ ಪದವಿಗಳಿಂದ ತೊಲಗಿಸಿದನು. ವೀರದಾಸನ ಸಾಮರ್ಥ್ಯವನ್ನು ಮೆಚ್ಚಿದನು.





# ಭೃಗು

"ಭೃಗು" ಅಂದರೆ "ಪ್ರಕಾಶಿಸು" ಎಂದು ಅರ್ಥ. ಅಂತೆಯೇ ಅಗ್ನಿಗೂ "ಭೃಗು" ಎಂಬ ಪದವಿರುವುದೆಂದು ಗೊತ್ತಾಗುತ್ತದೆ. "ಭೃಗು ವಂಶ"ವು ವೇದಕಾಲಕ್ಕಿಂತಲೂ ಹಿಂದಿನದು.

ಋಗ್ವೇದದಲ್ಲಿ ಅಗ್ನಿಗೆ ಸಂಬಂಧಿಸಿದ ಸೂಕ್ತಗಳಲ್ಲಿ ಭೃಗುಗಳ ಪ್ರಶಂಸೆ ಅಥವಾ ಪ್ರಸ್ತಾವನೆ ಇಪ್ಪತ್ತೊಂದು ಸಾರಿ ಬರುತ್ತದೆ ಎನ್ನುತ್ತಾರೆ. ಭೃಗುಗಳು ಮಾನವರಿಗೆ ಅಗ್ನಿಯನ್ನು ಒಪ್ಪಿಸಿದರೆಂದೂ, ಕೋಲಿನೊಳಗೆ ಅಡಗಿರುವ ಅಗ್ನಿಯನ್ನು ಕಂಡುಹಿಡಿದು, ಆ ಕೋಲನ್ನು ಮಥಿಸಿ, ಅಗ್ನಿಯನ್ನು ಹೊರಕ್ಕೆ ಬರಿಸಿದರೆಂದೂ ಹೇಳಲ್ಪಟ್ಟಿದೆ.

ಹೀಗೆ ವೇದಕಾಲದಲ್ಲಿ ಭೃಗುಗಳಿಗೆ ಅಗ್ನಿಯೊಂದಿಗೆ ಸಂಬಂಧವಿದ್ದರೆ ಪುರಾಣ ಕಾಲದಲ್ಲಿ ಭೃಗು ಮಹಾಮುನಿ ಎಂಬವನಿಗೆ ರಾಕ್ಷಸರೊಂದಿಗೆ ಸನ್ನಿಹಿತ ಸಂಬಂಧವಿದ್ದಂತೆ ಕಂಡುಬರುತ್ತದೆ. ಈ ಮಹಾಮುನಿ ಬ್ರಹ್ಮಹೃದಯದಿಂದ ಹುಟ್ಟಿದವನೆಂದು ಹೇಳಲ್ಪಟ್ಟಿದೆ. ಪ್ರಾಚೀನನೆಂದು ತಿಳಿಯಲ್ಪಡುವ ಇವನಿಗೆ ಹಿರಣ್ಯಕಶಿಪುವಿನ ಮಗಳಾದ ದಿತಿ ಎಂಬವಳು ಹಿರಿಯ ಹೆಂಡತಿಯಾಗಿದ್ದಳು. (ಕಶ್ಯಪ ಪ್ರಜಾಪತಿಯ ಪತ್ನಿಯಾದ ದಿತಿ ದಕ್ಷ-ಪ್ರಜಾಪತಿಯ ಮಗಳು; ರಾಕ್ಷಸರಿಗೆ ತಾಯಿಯಾದವಳು ಕಶ್ಯಪ ಪತ್ನಿ ದಿತಿ.) ಈ ದಿತಿ ಕವಿ ಎಂಬ ಮಗನನ್ನು ಪಡೆದಳು. ಈ ಕವಿಯ ಮಗನೇ ದಾನವರ ಗುರುವಾದ ಶುಕ್ರಾಚಾರ್ಯನು.

ರಾಕ್ಷಸರು ಭೃಗು ಮುನಿಯ ಮನೆಯನ್ನು ತಮ್ಮ ರಹಸ್ಯ ಸ್ಥಾವರವನ್ನಾಗಿ ಉಪಯೋಗಿಸಿಕೊಂಡು ದೇವತೆಗಳೊಂದಿಗೆ ಅಡಗಿ ಬೀಳುತ್ತ ಯುದ್ಧಮಾಡಿದರು. ಈ ಕಾಲದ "ಗೆರಿಲ್ಲಾ" ಯುದ್ಧಕ್ಕೆ ಅದುವೇ ಮೂಲಬೀಜವೆನ್ನಬಹುದು. ಭೃಗುವಿನ ಪತ್ನಿ ರಾಕ್ಷಸರನ್ನು ತನ್ನ ಮನೆಯಲ್ಲಿ ಅಡಗಿಸಿಡುತ್ತಿದ್ದಳು. ಈ ಸಂಗತಿ ವಿಷ್ಣುವಿಗೆ ಗೊತ್ತಾದುದರಿಂದ ಅವಳು ವಿಷ್ಣುಚಕ್ರದ ಪೆಟ್ಟಿನಿಂದ ಸತ್ತುಹೋದಳು. ಭೃಗುಮುನಿ ಕೋಪಗೊಂಡು ತನ್ನ ಹಾಗೆಯೇ ಪತ್ನೀವಿಯೋಗದಿಂದ ತಪಿಸಬೇಕೆಂದು ವಿಷ್ಣುವಿಗೆ ಶಾಪಕೊಟ್ಟನು. ವಿಷ್ಣು ರಾಮಾವತಾರದಲ್ಲಿ ಆ ಶಾಪ ಅನುಭವಿಸಿದನು.

ಭೃಗುವಿನ ಇನ್ನೊಬ್ಬಳು ಪತ್ನಿಯಾದ ಖ್ಯಾತಿ ಎಂಬವಳು ಕರ್ದಮ ಪ್ರಜಾಪತಿಯ ಮಗಳು.

ಇವಳು ಧಾತಾ, ವಿಧಾತಾ ಎಂಬ ಮಗಂದಿರ ತಾಯಿ. ಪುಲೋಮೆ ಎಂಬ ಇನ್ನೊಬ್ಬಳು ಹೆಂಡತಿ ಕೂಡಾ ಭೃಗುವಿಗೆ ಇದ್ದಳು. ಒಂದುದಿನ ಭೃಗು ಮುನಿ ಪುಲೋಮೆಯನ್ನು ಅಗ್ನಿಗೃಹದಲ್ಲಿ ಅಗ್ನಿಯನ್ನು ಕಾಯುತ್ತಿರುವಂತೆ ಹೇಳಿ ಎಲ್ಲಿಗೋ ಹೊರಟುಹೋದನು. ಆಗ ಪುಲೋಮ ಎಂಬ ಹೆಸರಿನ ರಾಕ್ಷಸನೊಬ್ಬನು ಅಗ್ನಿ ಗೃಹದೊಳಗೆ ಬಂದ ಅಲ್ಲಿದ್ದ ಪುಲೋಮೆಯನ್ನು ನೋಡಿ "ಯಾರಿವಳು ?" ಎಂದು ಅಗ್ನಿಯನ್ನು ಕೇಳಿದನು. "ಭೃಗು ಮುನಿಯ ಪತ್ನಿ ಪುಲೋಮೆ" ಎಂದನು ಅಗ್ನಿ. "ಹಾಗಾದರೆ ಇವಳು ನನ್ನ ಪತ್ನಿಯಾಗಿರಬೇಕಾದವಳು" ಎಂದು ಹೇಳಿ ಪುಲೋಮನು ಪುಲೋಮೆಯನ್ನು ಎತ್ತಿಕೊಂಡು ಹೋದನು. ಇದಕ್ಕೆ ಅಗ್ನಿಕಾರಣನಾದನೆಂದುಕೊಂಡು ಭೃಗು ಮುನಿ ಅಗ್ನಿಯನ್ನು, ಸರ್ವಭಕ್ಷಕನಾಗುವಂತೆ ಶಪಿಸಿದನು.

"ನಾನು ಇದ್ದ ಸಂಗತಿಯಷ್ಟೇ ಹೇಳಿದೆ, ನನ್ನದೇನು ತಪ್ಪಿದೆ ?" ಎಂದುಕೊಂಡು ಅಗ್ನಿ ಕೋಪದಿಂದ ಮುಷ್ಕರ ಹಿಡಿದು ಮೂಲೆಯಲ್ಲಿ ಕುಳಿತನು. ದೇವತೆಗಳಿಗೆ ಹವ್ಯವಾಹಕ ಕಾರ್ಯ ನಿಂತುಹೋಯಿತು. ಕಡೆಗೆ ಎಲ್ಲಾ ದೇವತೆಗಳೂ ಸೇರಿ ಅಗ್ನಿಯನ್ನು ಸ್ತುತಿಸಿ, ನಿತ್ಯಶುಚಿ ಎಂದು ವರವಿತ್ತು, ಸಮಾಧಾನ ಪಡಿಸಿದ ಮೇಲೆ, ಅಗ್ನಿ ಮುಷ್ಕರಬಿಟ್ಟು ಕಾರ್ಯನಿರ್ವಹಣೆಗೆ ತೊಡಗಿದನು.

ಋಷಿಶ್ರೇಷ್ಠನೆಂದು ಕೀರ್ತಿವೆತ್ತ ಭೃಗು ಹಿಮವಂತನನ್ನು ಕೂಡಾ ಶಪಿಸಿದ್ದಾನೆ. ಭೃಗು ಇಷ್ಟೆಲ್ಲಾ ನಿಗ್ರಹಶಕ್ತಿಯುಳ್ಳವನಾದರೂ ಅನುಗ್ರಹಶಕ್ತಿಯೂ ಭೃಗುವಿಗಿದೆ. ವಸಿಷ್ಠನು ನಿಮಿಗೆ ಸಾಯುವಂತೆ ಶಾಪ ಕೊಟ್ಟಾಗ, ಭೃಗು ನಿಮಿಯನ್ನು "ನಿಮೇಷ" (ಕಣ್ಣಿನ ರೆಪ್ಪೆಗಳು) ರೂಪದಲ್ಲಿ ಇರಿಸಿದನು.

ಭೃಗು ಒಂದು ಸುಳ್ಳಿನಿಂದ ವೀತಹವ್ಯನೆಂಬ ಕ್ಷತ್ರಿಯನನ್ನು ಬ್ರಾಹ್ಮಣನನ್ನಾಗಿ ಮಾಡಿದ್ದಾನೆ. ವತ್ಸದೇಶದ ರಾಜನಾದ ವೀತಹವ್ಯನ ಮಗಂದಿರು, ಕಾಶೀರಾಜನ ಕುಟುಂಬವನ್ನು ಕೊಂದು ದಿವೋದಾಸನನ್ನು ಸೋಲಿಸಿದರು. ದಿವೋದಾಸನ ಮಗ ಪ್ರತರ್ದನನು ವೀತಹವ್ಯನ ಮಗಂದಿರನ್ನು ಕೊಂದು ದಿವೋದಾಸನನ್ನೂ ಕೊಲ್ಲಲು ಬಂದರು. ವೀತಹವ್ಯನು ಭೃಗುವಿನ ಆಶ್ರಮದಲ್ಲಿ ಅಡಗಿದನು. ಪ್ರತರ್ದನನು ಭೃಗುವಿನ ಆಶ್ರಮದೊಳಗೆ ಬಂದು ವೀತಹವ್ಯನೆಂಬ ಕ್ಷತ್ರಿಯನನ್ನು ವಿಚಾರಿಸಿದನು. ತನ್ನ ಆಶ್ರಯದಲ್ಲಿ ಕ್ಷತ್ರಿಯನೇ ಇಲ್ಲವೆಂದನು ಭೃಗು ! ಹೀಗೆ ವೀತಹವ್ಯನು ಬ್ರಾಹ್ಮಣನಾಗಿ ಬದುಕಿದನು. ಈ ಭೃಗುವಿನ ವಂಶದಲ್ಲಿ ಉದ್ಭವಿಸಿದವನೇ ಭಾರ್ಗವನೆಂಬ ಪರಶುರಾಮ !



# ಉಕ್ಕಿಬಂದ ಸರಸ್ವತಿ



ಗೌತಮನೆಂಬ ಋಷಿಗೆ ಏಕತನೆಂದೂ, ದ್ವಿತನೆಂದೂ, ತ್ರಿತನೆಂದೂ ಮೂವರು ಗಂಡು ಮಕ್ಕಳಿದ್ದರು. ತಂದೆ ಮೂವರಿಂದಲೂ ಒಳ್ಳೆಯ ಅಧ್ಯಯನ ಮಾಡಿಸಿದನು.



ಮೂವರಲ್ಲಿ ತ್ರಿತನು ಶ್ರೇಷ್ಠನಾಗಿದ್ದನು. ಅವನ ಉಪನ್ಯಾಸಗಳನ್ನು ಕೇಳಲಿಕ್ಕೆ ಎಲ್ಲೆಲ್ಲಿಯ ಜನರು ಬಂದು ಗುಂಪುಗೂಡುತ್ತಿದ್ದರು



ಒಂದುಸಾರಿ ಮೂವರು ಸೋದರರೂ ಯಜ್ಞ ಕಾರ್ಯಕ್ಕೆ ಪ್ರಾರಂಭಿಸಿ, ಅದಕ್ಕೆ ತಕ್ಕ ಸ್ಥಳವನ್ನು ಹುಡುಕುತ್ತಾ ಹೊರಟರು.



ಅವರು ನಿರ್ಜನ ಪ್ರದೇಶದಲ್ಲಿ ನಡೆಯುತ್ತಿರುವಾಗ, ತ್ರಿತನ ಇದಿರಿನಲ್ಲಿ ದೊಡ್ಡದೊಂದು ಹುಲಿ ಪ್ರತ್ಯಕ್ಷವಾಯಿತು. ಅದು ತೀರ ಸಮೀಪಿಸುವವರೆಗೂ ಅವನಿಗೆ ಗೊತ್ತಾಗಲಿಲ್ಲ.



ಏಕತನೂ, ದ್ವಿತನೂ ಹುಲಿಯನ್ನು ಮುಂದಾಗಿ ನೋಡಿದರೂ, ತ್ರಿತನಿಗೆ ಎಚ್ಚರಿಕೆ ಹೇಳದೆ, ತಮ್ಮಷ್ಟಕ್ಕೆ ಓಡಿಹೋಗಿ ಮರದ ಮೇಲೆ ಏರಿಕೊಂಡರು.



ತ್ರಿತನು ಸಹಾ ಓಡಿ ಹೋಗುತ್ತಾ, ಒಂದು ಪಾಳು ಬಾವಿಯೊಳಗೆ ಬಿದ್ದನು. ಅವನಿಗೆ ಹುಲಿಯಿಂದ ಅಪಾಯ ತಪ್ಪಿತು. ಬಾವಿಯೊಳಗೆ ಬಿದ್ದುದರಿಂದ ಮೂರ್ಛಿತನಾದವನಿಗೆ ಬೇಗದಲ್ಲೇ ಸ್ಮೃಹೆಯೂ ಬಂತು.



ಅವನನ್ನು ಹುಲಿ ಕೊಂದು ಹಾಕಿ ತಿಂದಿತೆಂದು ಕೊಂಡು ಅಣ್ಣಂದಿರಿಗೆ ಸಂತೋಷವಾಯಿತು. ಅವನಿಗೆ ಯಜ್ಞ ಭಾಗವನ್ನು ಕೊಡುವ ನಷ್ಟ ವಿಲ್ಲ ಎಂದುಕೊಂಡರು.



ಆದರೆ ಭೂತ ಪಿಶಾಚಿಗಳ ಉಚ್ಚಾಟನೆಯ ಮಂತ್ರ ತ್ರಿತನಿಗಷ್ಟೇ ಗೊತ್ತು. ಅವನ ಅಣ್ಣಂದಿರಿಗೆ ತಿಳಿಯದು. ಅಂತೆಯೇ ಅವರ ಯಜ್ಞ ಭೂಮಿಯನ್ನು ಪಿಶಾಚಿಗಳು ಆಕ್ರಮಿಸಿ ಕೊಂಡುವು.



ಪಾಳುಬಿದ್ದ ಬಾವಿಯಲ್ಲಿದ್ದ ತ್ರಿತನು, ಯಜ್ಞದ ಮುಹೂರ್ತವು ಸಮೀಪಿಸಿದುದನ್ನು ತಿಳಿದು, ಕಲ್ಲುಗಳನ್ನು ಒಡೆದು ಬೆಂಕಿಯ ಕಿಡಿಗಳನ್ನು ಹುಟ್ಟಿಸುತ್ತ ಅದೇ ಯಜ್ಞವೆಂದುಕೊಂಡನು.



ಅದು ಪವಿತ್ರ ಸ್ಥಳವೂ ಅಲ್ಲ. ಅವನ ಹತ್ತಿರ ಯಜ್ಞ ಪರಿಕರಗಳಾವುದೂ ಇರಲಿಲ್ಲ. ಆದರೂ ಅವನ ದೀಕ್ಷೆಗೆ ಮೆಚ್ಚಿ ದೇವತೆಗಳು ಪ್ರತ್ಯಕ್ಷ ರಾಗಿ, ವರವನ್ನು ಕೇಳು ಎಂದರು.

“ಈ ಬಾವಿಯನ್ನು ಪುನೀತ ಗೊಳಿಸಿರಿ. ಇದರಲ್ಲಿ ಸ್ನಾನಮಾಡಿದವರು ಪವಿತ್ರರಾಗುವಂತೆ ಅನು ಗ್ರಹಿಸಿರಿ.” ಎಂದು ತ್ರಿತನು ದೇವತೆಗಳನ್ನು ವರ ಕೇಳಿದನು. ಕೂಡಲೇ ಬಾವಿಯೊಳಗೆ ನೀರು ಉಕ್ಕಿ ಅವನನ್ನು ಮೇಲಕ್ಕೆತ್ತಿತು.





ಅದುವರೆಗೆ ಅಂತರ್ವಾಹಿನಿಯಾಗಿದ್ದ ಸರಸ್ವತೀ ನದಿ, ತ್ರಿತನ ವರ ಫಲಿತವಾಗಿ ಮೇಲೆ ಉಕ್ಕಿ ಹರಿಯಿತು. ಹೀಗೆ ಸರಸ್ವತೀ ನದಿಯನ್ನು ಒದಗಿಸಿದ ತ್ರಿತನು ಪ್ರಶಂಸೆಗೆ ಪಾತ್ರನಾದನು.



# ಅಷ್ಟಾವಕ್ರ

**ಪು**ರಾಣ ಕಾಲದಲ್ಲಿ ಏಕಪಾದನೆಂಬ ವೇದೀಯ ಬ್ರಾಹ್ಮಣನು ಗುರುಕುಲವನ್ನು ನಡೆಯಿಸಿಕೊಂಡಿದ್ದನು. ಏಕಪಾದನು ಶಿಷ್ಯರಿಂದ ಹಗಲೂ ರಾತ್ರಿಯೂ ವಿಶ್ರಾಂತಿಗೆ ಎಡೆಗೊಡದಂತೆ ವೇದಾಧ್ಯಯನ ಮಾಡಿಸುತ್ತಿದ್ದನು. ಅದರಿಂದ ಶಿಷ್ಯರು ತುಂಬಾ ಸಂಕಟಪಡುತ್ತಿದ್ದರು. ಆ ಸಮಯದಲ್ಲಿ ಏಕಪಾದನ ಪತ್ನಿ ಸುಜಾತೆಯ ಗರ್ಭದಲ್ಲಿದ್ದ ಶಿಶು ಏಕಪಾದನನ್ನು ಸಂಬೋಧಿಸಿ " ಅಪ್ಪಾ, ನಿನ್ನ ಶಿಷ್ಯರಿಂದ ಏಕೆ ಹೀಗೆ ಓದಿಸುವಿ ? ಅವರ ಆರೋಗ್ಯ ಕೆಡುವುದಿಲ್ಲವೆ ? " ಎಂದು ಆಕ್ಷೇಪಣೆಯೆತ್ತಿತು. " ನನ್ನ ಅಧ್ಯಯನ ಕ್ರಮದಲ್ಲಿ ವಕ್ರತೆಯನ್ನು ಕಂಡ ನೀನು ಅಷ್ಟಾವಕ್ರನಾಗಿ ಹುಟ್ಟು ! " ಎಂದು ಏಕಪಾದನು ತನ್ನ ಮಗನಿಗೆ ಶಪಿಸಿದನು.

ಮನೆಗೆ ಬೇಕಾದ ಸಾಮಗ್ರಿಗಳಿಗೆ ಧನವನ್ನು ಸಂಗ್ರಹಿಸಿಕೊಂಡು ಬರಲು ಏಕಪಾದನು ಜನಕರಾಜನ ಬಳಿಗೆ ಹೋದನು. ಅವನು ಮನೆಯಲ್ಲಿಲ್ಲದ ಸಮಯದಲ್ಲಿ ಅಷ್ಟಾವಕ್ರನು ಹುಟ್ಟಿದನು.

ಅಷ್ಟಾವಕ್ರನ ಸೋದರ ಮಾವನ ಹೆಸರು ಉದ್ದಾಲಕ. ಸುಜಾತೆ ಉದ್ದಾಲಕನ ಮನೆಯಲ್ಲಿಯೇ ಅಷ್ಟಾವಕ್ರನನ್ನು ಹೆತ್ತಳು. ಅದೇ ಕಾಲದಲ್ಲಿ ಉದ್ದಾಲಕನಿಗೂ ಶ್ವೇತಕೇತು ಎಂಬ ಮಗನು ಹುಟ್ಟಿದನು. ಇಬ್ಬರೂ ಒಟ್ಟಿಗೇ ಬೆಳೆಯುತ್ತಿದ್ದರು.

ಒಂದುದಿನ ಅಷ್ಟಾವಕ್ರನು ತನ್ನ ಮಾವಯ್ಯನ ತೊಡೆಯ ಮೇಲೆ ಕುಳಿತುಕೊಂಡನು. ಆಗ ಶ್ವೇತಕೇತು " ನನ್ನ ಅಪ್ಪನ ತೊಡೆಯ ಮೇಲೆ ನೀನೇಕೆ ಕೂಡುತ್ತೀ ? ನಿನ್ನ ತಂದೆಯ ತೊಡೆಯಲ್ಲಿ ಹತ್ತಿ ಕೂಡು " ಎಂದನು. ಆಗ ಅಷ್ಟಾವಕ್ರನು ತಾಯಿಯ ಬಳಿಗೆ ಹೋಗಿ, " ನನ್ನ ತಂದೆ ಎಲ್ಲಿದ್ದಾರೆ? " ಎಂದು ಕೇಳಿದನು. " ಧನವನ್ನು ಸಂಗ್ರಹಿಸಿಕೊಂಡು ಬರಲು ಜನಕರಾಜನ ಸಭೆಗೆ ಹೋಗಿದ್ದಾರೆ. ಯಾವಾಗ ಬರುವರೋ ? " ಎಂದಳು ತಾಯಿ.

ಕೂಡಲೇ ಅಷ್ಟಾವಕ್ರನು ತನ್ನ ತಂದೆಯನ್ನು ಕರೆದುಕೊಂಡು ಬರಲು ಜನಕರಾಜನ ಸಭೆಗೆ ಹೋದನು. ಅಲ್ಲಿ ವಿಚಾರಿಸಲು, ತನ್ನ ತಂದೆ ಜನಕರಾಜನ ಸಭೆಯಲ್ಲಿ ವರುಣನ ಮಗನಾದ ವಂದಿಯೊಂದಿಗೆ ವಾದನೆಗೆ ಇಳಿದು ಸೋತು ಜಲಬಂಧನದಲ್ಲಿರುವುದಾಗಿ ತಿಳಿಯಿತು. ವಂದಿಯೊಂದಿಗೆ ಸೋತು ಹೋದವರೆಲ್ಲರೂ ನೀರಿನಲ್ಲಿ ಬಂಧಿಸಲ್ಪಟ್ಟಿದ್ದಾರಂತೆ.

ಅಷ್ಟಾವಕ್ರನು ಜನಕರಾಜನ ಸಭೆಗೆ ಹೋಗಿ, ವಂದಿಯನ್ನು ತನ್ನೊಂದಿಗೆ ವಾದಕ್ಕೆ ಕರೆದನು. ಇಬ್ಬರೂ ವಾದನೆಗಿಳಿದರು. ಅಷ್ಟಾವಕ್ರನು ತನ್ನ ವಿದ್ವತ್ತಿನಿಂದ ವಂದಿಯನ್ನು ಸೋಲಿಸಿದನು. ಗೆದ್ದುದಕ್ಕೆ ಪ್ರತಿಫಲವಾಗಿ ತನ್ನ ತಂದೆಯನ್ನೂ, ಜಲಬಂಧನದಲ್ಲಿದ್ದ ಇತರರನ್ನೂ ಬಂಧವಿಮೋಚನೆಗೊಳಿಸಬೇಕೆಂದು ಅಷ್ಟಾವಕ್ರನು ಕೇಳಿಕೊಂಡನು. ಹಾಗೆಯೇ ಎಲ್ಲರ ಬಿಡುಗಡೆಯೂ ಆಯಿತು. ಅಷ್ಟಾವಕ್ರನು ತಂದೆಯೊಂದಿಗೆ ವಿಜಯಶಾಲಿಯಾಗಿ ಮನೆಗೆ ಹಿಂದಿರುಗಿದನು.

ಪ್ರಾಯ ಪ್ರಬುದ್ಧನಾದ ಅಷ್ಟಾವಕ್ರನು ವದಾನ್ಯ ಎಂಬವನ ಮಗಳಾದ ಸುಪ್ರಭೆ ಎಂಬವಳನ್ನು ಮದುವೆ ಮಾಡಿಕೊಳ್ಳಬೇಕೆಂದು ಬಯಸಿದನು. ತಾನೊಂದು ಪರೀಕ್ಷೆಯನ್ನು ಕೊಡುವನೆಂದೂ, ಅದರಲ್ಲಿ ಗೆದ್ದರೆ ಸುಪ್ರಭೆಯನ್ನು ಮದುವೆ ಮಾಡಿಕೊಡುತ್ತೇನೆಂದೂ ವದಾನ್ಯನು ಹೇಳಿದನು. ಆ ಪರೀಕ್ಷೆ ಏನೆಂದರೆ, "ಹಿಮಾಲಯಕ್ಕೆ ಹೋಗಿ, ಅಲ್ಲಿರುವ ಒಬ್ಬಳು ಸ್ತ್ರೀಯನ್ನು ನೋಡಿ, ಮಾತಾಡಿಸಿ ಬರಬೇಕು" ಎಂಬುದಾಗಿತ್ತು.

ಅಷ್ಟಾವಕ್ರನು ಹಿಮಾಲಯಕ್ಕೆ ಹೋದನು. ಅಲ್ಲಿ ಅಲಕಾಪುರಿಯಲ್ಲಿ ಕುಬೇರನ ಅತಿಥಿಯಾಗಿ ನಿಲ್ಲಬೇಕಾಯಿತು. ಕುಬೇರನು ಅವನಿಗೆ ದೊಡ್ಡ ರೀತಿಯಲ್ಲಿ ಅತಿಥಿಸತ್ಕಾರಗಳನ್ನು ಮಾಡಿ, ನೃತ್ಯಗಾನ ವಿನೋದಗಳನ್ನು ನಡೆಸಿದನು. ಅವನಿಗೆ ತಿಳಿಯದಂತೆಯೇ ಒಂದು ವರ್ಷ ಕಳೆಯಿತು.

ತರುವಾಯ ಅವನು ವದಾನ್ಯನು ಹೇಳಿದ ಸ್ತ್ರೀಯನ್ನು ನೋಡಿದನು. ಅವಳು ತನ್ನ ಚಿನ್ನದ ಮನೆಯಲ್ಲಿ ಅವನಿಗೆ ಆತಿಥ್ಯವಿತ್ತು ಉಪಚರಿಸಿ, ಅವನು ತನ್ನನ್ನೇ ಮದುವೆಯಾಗಬೇಕೆಂದು ಕೇಳಿಕೊಂಡಳು. ಆದರೆ ಅಷ್ಟಾವಕ್ರನು ಅವಳಿಗೆ ವಶನಾಗದೆ, "ನಾನು ದಾನವಾಗಿ ಬರುವವಳನ್ನೇ ಮದುವೆಯಾಗುತ್ತೇನೆ. ನಿನ್ನ ತಂದೆ ಯಾರು ? ಅವನು ನಿನ್ನನ್ನು ನನಗೆ ಕನ್ಯಾದಾನ ಮಾಡಲಿ" ಎಂದನು ಅಷ್ಟಾವಕ್ರ. ಆಗ ಅವಳು ನಿಜಸಂಗತಿಯನ್ನು ಬಯಲುಮಾಡಿದಳು. ಅವಳು ಮಾಯಾ ಕನ್ಯೆಯಂತೆ. ವದಾನ್ಯನು ಅಷ್ಟಾವಕ್ರನನ್ನು ಪರೀಕ್ಷಿಸಲಿಕ್ಕಾಗಿ ಅವಳನ್ನು ಸೃಷ್ಟಿಸಿದ್ದಾನಂತೆ. ಈ ಪರೀಕ್ಷೆಯಲ್ಲಿ ಅಷ್ಟಾವಕ್ರನು ಗೆದ್ದನು. ಒಂದಕ್ಕಿಂತ ಒಂದು ಹೆಚ್ಚಿನದನ್ನು ನೋಡಿದರೆ ಅವನು ಚಂಚಲನಾಗುವವನಲ್ಲವೆಂದು ಗೊತ್ತಾಯಿತು. ಅಂತೆಯೇ ಹಿಮಾಲಯದಿಂದ ಹಿಂದಿರುಗಿ ಬಂದ ಕೂಡಲೇ ಸುಪ್ರಭೆಯೊಂದಿಗೆ ಅವನ ಮದುವೆಯಾಯಿತು. ಅವನು ರೂಪದಲ್ಲಿ ಅಷ್ಟಾವಕ್ರನಾಗಿದ್ದನೋ, ಇಲ್ಲವೋ. ಗುಣಗಳಲ್ಲಿ ಸರ್ವ ಶ್ರೇಷ್ಠನಾಗಿ ಬೆಳಗಿದನು.






ಸುಮಾರು ಒಂದು ಸಾವಿರ ವರ್ಷಗಳಿಗೆ ಹಿಂದೆ ಐಶ್ವರ್ಯವಂತನಾದ ಒಬ್ಬ ವೈಶ್ಯ ಪ್ರವರನಿದ್ದನು. ಅವನಿಗೆ ಸುಬುದ್ಧಿ ಎಂಬ ಒಬ್ಬ ಮಗನೂ. ಸುಮಿತ್ರೆ ಎಂಬ ಒಬ್ಬಳು ಮಗಳೂ ಇದ್ದರು. ಹೆಂಡತಿ ತೀರಿಹೋಗಿದ್ದಳು. ಅವನು ಸಾಯುವ ಮೊದಲು ತನ್ನ ಮಗನನ್ನು ಹತ್ತಿರ ಕರೆದು. "ಅಪ್ಪಾ. ನಾನು ಸತ್ತುಹೋದ ಮೇಲೆ, ಚಿಕ್ಕವಳಾದ ನಿನ್ನ ತಂಗಿಯನ್ನು ಚೆನ್ನಾಗಿ ನೋಡಿಕೋ. ಒಳ್ಳೆಯ ವರನಿಗೆ ಕೊಟ್ಟು ಮದುವೆಮಾಡು. ನನ್ನ ವ್ಯಾಪಾರವನ್ನು ಕೂಡಾ ನಿಲ್ಲಿಸದೆ ಅಭಿವೃದ್ಧಿಗೆ ತಾ. ಇದೇ ನನ್ನ ಕೊನೆಯ ಆಸೆ" ಎಂದು ಹೇಳಿದನು.

ತಂದೆ ತೀರಿಹೋದ ಮರು ವರ್ಷದ ಮೇಲೆ ಸುಬುದ್ಧಿ ಮೂರು ನೌಕೆಗಳ ಮೇಲೆ ಸರಕುಗಳನ್ನು ಹಾಕಿಕೊಂಡು ದೇಶಾಂತರಗಳಿಗೆ ಹೊರಡಲು ತಯಾರಾದನು. ಅವನು ತನ್ನ ತಂಗಿಯನ್ನು ಕರೆದು. "ನೋಡು ತಂಗೀ. ಈಸಾರಿ ನಾನು ಹಿಂದಿರುಗುವಾಗ ಬಹಳ ತಡವಾದೀತು. ನೀನೇನೂ ಗಾಬರಿಯಾಗಬೇಡ. ಪರಕೀಯರೊಂದಿಗೆ ಮಾತಾಡಬೇಡ. ಧರ್ಮ ನ್ಯಾಯಗಳನ್ನು ಮೀರಿ ನಡೆಯಬೇಡ. ತುಂಬಾ ಎಚ್ಚರಿಕೆಯಿಂದಿರು. ಈಸಾರಿ ನಿನಗೆ ಯೋಗ್ಯನಾದ ವರನನ್ನೂ ಹುಡುಕಬೇಕೆಂದಿದ್ದೇನೆ" ಎಂದು ಹೇಳಿ. ಅವಳ ಚಿತ್ರಪಟವನ್ನೂ ತನ್ನೊಂದಿಗೆ ತೆಗೆದುಕೊಂಡನು. ಮನೆಗೆ ತಕ್ಕ ಬಂದೋಬಸ್ತುಗಳನ್ನು ಮಾಡಿ. ಹೊರಟನು.

ಎರಡು ವರ್ಷಗಳು ದಾಟಿ ಮೂರನೇ ವರ್ಷ ಪ್ರಾರಂಭವಾಯಿತು. ಸುಬುದ್ಧಿ ಅನೇಕ ದೇಶಗಳಲ್ಲಿ ವ್ಯಾಪಾರ ಮಾಡುತ್ತಾ ಒಂದಾನೊಂದು ದೇಶದ ರೇವಿನಲ್ಲಿ ನೌಕೆಗಳನ್ನು ಲಂಗರು ಹಾಕಿಸಿದನು. ಆಮೇಲೆ ಒಂದು ಚಿನ್ನದ ಪಾತ್ರೆಯಲ್ಲಿ ರತ್ನಗಳನ್ನಿರಿಸಿಕೊಂಡು. ರತ್ನಕಂಬಳಿ ಮೊದಲಾದ ಉತ್ತಮ ಬಹುಮಾನ ವಸ್ತುಗಳನ್ನು ಸಹಾ ಎತ್ತಿಕೊಂಡು ಆ ದೇಶದ ರಾಜನಾದ ಸುದರ್ಶನನ ಬಳಿಗೆ ಹೋದನು.

ತಾನು ತಂದ ಬಹುಮಾನಗಳನ್ನು ಸುದರ್ಶನ ರಾಜನಿಗೆ ಸಮರ್ಪಿಸುತ್ತ. "ತಮ್ಮ ದೇಶದಲ್ಲಿ ವ್ಯಾಪಾರಮಾಡಲು ಅಪ್ಪಣೆ ಕೊಡಬೇಕು" ಎಂದು ರಾಜನನ್ನು ಪ್ರಾರ್ಥಿಸಿಕೊಂಡನು.

ಸುಬುದ್ಧಿ ತಂದುಕೊಟ್ಟ ಬಹುಮಾನಗಳನ್ನು ನೋಡಿ ಸುದರ್ಶನ ರಾಜನು ಬಹಳ ಸಂತೋಷ



ಪಟ್ಟನು. ಅದುವರೆಗೆ ಯಾವ ವರ್ತಕನು ಸಹಾ ಅವನಿಗೆ ಇಂತಹ ಅಮೂಲ್ಯವಾದ ಕಾಣಿಕೆಗಳನ್ನು ತಂದುಕೊಟ್ಟಿರಲಿಲ್ಲ. ಆದುದರಿಂದ ಸುದರ್ಶನನು ಸುಬುದ್ಧಿಯ ಕೋರಿಕೆಯಂತೆ ವ್ಯಾಪಾರ ನಡೆಯಿಸಲು ಅನುಮತಿಕೊಟ್ಟುದು ಮಾತ್ರವಲ್ಲದೆ, ಅವನು ನೌಕೆಗಳಲ್ಲಿ ತಂದ ಸರಕುಗಳನ್ನು ನೋಡಲು ತನ್ನ ಕಡೆಯವರೊಂದಿಗೆ ರೇವಿಗೂ ಹೊರಟನು.

ನೌಕೆಯೊಳಗಿನ ವಸ್ತುಗಳನ್ನು ನೋಡಿ, ಆನಂದಿಸುತ್ತಾ ಬರುತ್ತಿದ್ದ ಸುದರ್ಶನ ರಾಜನ ಕಣ್ಣು, ಒಂದು ಸ್ಥಳದಲ್ಲಿದ್ದ, ಚಿತ್ರದ ಮೇಲೆ ನೆಟ್ಟು ನಿಂತಿತು! ಅದು ಸುಮಿತ್ರೆಯ ಚಿತ್ರ! "ಯಾರು ಈ ಸೌಂದರ್ಯರಾಶಿ?" ಎಂದು ಕೇಳಿದನು ಸುದರ್ಶನ.

"ಪ್ರಭು! ಅವಳು ನನ್ನ ತಂಗಿ ಸುಮಿತ್ರೆ." ಎದನು ಸುಬುದ್ಧಿ. "ಹೌದೇನು? ಈ ಸೌಂದರ್ಯಕ್ಕೆ ತಕ್ಕಹಾಗೆ ಸುಶೀಲವತಿಯೂ ಸುಗುಣವತಿಯೂ ಆಗಿದ್ದರೆ, ಇವಳನ್ನು ಮದುವೆ ಮಾಡಿಕೊಂಡು ಪಟ್ಟಮಹಿಷಿಯಾಗಿ ಮಾಡಿಕೊಳ್ಳುತ್ತೇನೆ" ಎಂದನು ಸುದರ್ಶನರಾಜ.

"ಇವಳ ಸೌಶೀಲ್ಯತೆಗೆ ನನ್ನ ತಲೆಯನ್ನೇ ಪಣವಿಡಬಲ್ಲೆ ಪ್ರಭುಗಳೇ" ಎಂದನು ಸುಬುದ್ಧಿ.

ಈ ಸಂಭಾಷಣೆಯನ್ನು ಕೇಳುತ್ತಿದ್ದ ಸೇನಾಧಿಪತಿಗೆ ಸಹಿಸಲಾಗಲಿಲ್ಲ. ಅವನು ತನ್ನೊಳಗೆ, "ಏನಿದು! ಕಡೆಗೆ ಒಬ್ಬಳು ವೈಶ್ಯ ಸ್ತ್ರೀ ನಮಗೆಲ್ಲ ರಾಣಿಯಾಗುವುದೇ? ನನ್ನಂಥವರ ಪತ್ನಿಯರು ಇವಳಿಗೆ ಸೇವೆ ಮಾಡುವುದುಂಟೆ? ಇದನ್ನು ತಪ್ಪಿಸಲೇ ಬೇಕು" ಎಂದುಕೊಂಡು, ರಾಜನೊಂದಿಗೆ, "ಪ್ರಭುಗಳೇ, ಈ ಚಿತ್ರದಲ್ಲಿರುವವಳನ್ನು ನಾನು ಚೆನ್ನಾಗಿ ಬಲ್ಲೆನು. ಇವಳು ಕುಟುಂಬ ಸ್ತ್ರೀಯೇ ಅಲ್ಲ." ಎಂದನು ದಿಟ್ಟತನದಿಂದ.

"ಹೇಗೆ ಬಲ್ಲೆ?" ಎಂದು ರಾಜನು ಕೇಳಲು "ಅದನ್ನು ಸ್ಪಷ್ಟವಾಗಿ ಬೇರೆ ಹೇಳಬೇಕೆ?" ಎಂದು ತಲೆ ತಗ್ಗಿಸಿಕೊಂಡ ಸೇನಾಧಿಪತಿ.

ರಾಜನಿಗೆ ಸುಬುದ್ಧಿಯ ಮೇಲೆ ಬಹಳ ಕೋಪ ಬಂತು. "ಇಂತಹ ದುಃಶೀಲೆಯನ್ನು ಸುಶೀಲೆಯೆಂದು ಸುಳ್ಳುಹೇಳಿ ನನ್ನನ್ನು ಮೋಸಪಡಿಸಿದೆಯಾ? ನಿನ್ನ ತಲೆ ತೆಗೆಯಿಸುತ್ತೇನೆ!" ಎಂದನು ಸುಬುದ್ಧಿಯೊಂದಿಗೆ.

"ಪ್ರಭುಗಳೇ, ನಿಮ್ಮ ಸೇನಾಧಿಪತಿ ಹೇಳು ಮಾತು ನಂಬಬೇಡಿರಿ. ರು ಜು ವಿ ನೊಂ ದಿ ಗೆ ಮಾತಾಡಲಿ. ನನ್ನ ತಂಗಿಯನ್ನು ಚೆನ್ನಾಗಿ ಬಲ್ಲೆನೆನ್ನುತ್ತಾನಲ್ಲ? ಹಾಗಾದರೆ ಅವಳ ಬೆರಳಲ್ಲಿರುವ ಉಂಗುರವನ್ನು ತರಲಿಕ್ಕೆ ಹೇಳಿರಿ. ಅವಳ ಹುಟ್ಟು ಮಚ್ಚೆ ಎಲ್ಲಿರುವುದೆಂಬುದನ್ನೂ ತಿಳಿದುಕೊಂಡು ಬರಲು ಹೇಳಿರಿ" ಎಂದನು ಸುಬುದ್ಧಿ.

ಸುದರ್ಶನ ರಾಜನಿಗೆ ಇದು ನ್ಯಾಯವಾಗಿಯೇ ತೋರಿತು. ಅವನು ತನ್ನ ಸೇನಾಧಿಪತಿಯೊಂದಿಗೆ, "ನೀನು ಎರಡು ತಿಂಗಳೊಳಗೆ ಈ ಸ್ತ್ರೀಯ

ಉಂಗುರವನ್ನೂ. ಅವಳ ಹುಟ್ಟುಮಚ್ಚೆಯ ರಹಸ್ಯವನ್ನೂ ತಿಳಿದುಕೊಂಡು ಬಂದು ಹೇಳದಿದ್ದರೆ ನಿನ್ನ ತಲೆಯನ್ನು ಕಡಿಸುತ್ತೇನೆ" ಎಂದು ಹೇಳಿದನು.

"ಅವಳು ನನ್ನ ಪರಿಚಿತಳೆಂಬುದನ್ನು ಹಾಗೆಯೇ ನಿರೂಪಿಸುತ್ತೇನೆ ಪ್ರಭುಗಳೇ!" ಎಂದು ಹೇಳಿ ಸೇನಾಧಿಪತಿ ಸುಮಿತ್ರೆ ಇರುವ ದೇಶಕ್ಕೆ ಹೊರಟನು. ಅಲ್ಲಿ ಒಬ್ಬಳು ಅಡಗೂಲಜ್ಜಿಯ ಮನೆಯಲ್ಲಿ ಇಳಿದುಕೊಂಡು. ಅವಳಿಂದ ತನಗೆ ಆಗಬೇಕಾದ ಕೆಲಸವನ್ನು ಹೇಳಿ. "ಅಜ್ಜಮ್ಮಾ, ನನಗೆ ಆ ರಹಸ್ಯವನ್ನೂ, ಉಂಗುರವನ್ನೂ ತಂದು ಕೊಟ್ಟರೆ ನಿನಗೆ ಬೇಕಾದಷ್ಟು ಚಿನ್ನವನ್ನು ಕೊಡುತ್ತೇನೆ" ಎಂದು ಆಶೆ ಹುಟ್ಟಿಸಿದನು.

ಬಡವಳಾದ ಅಡುಗೂಲಜ್ಜಿ ಧನದ ಆಶೆಗೊಳಗಾಗಿ ಸುಮಿತ್ರೆಯ ಮನೆಗೆ ಏನೋ ಸಹಾಯ ಕೇಳಲು ಹೋದಹಾಗೆ ಹೋಗಿ. ಆ ಮಾತು ಈಮಾತು ಆಡುತ್ತ ಅವಳ ಬೆನ್ನಿನ ಬದಿಯಲ್ಲಿರುವ ಹುಟ್ಟುಮಚ್ಚೆಯನ್ನು ಕಂಡು ಹಿಡಿದಳು. ಆಮೇಲೆ ಸ್ವಲ್ಪ ಮಂಕುಪುಡಿಯ ವಾಸನೆ ತೋರಿಸಿ, ಸುಮಿತ್ರೆಗೆ ಮಂಕು ಕವಿಯುವಂತೆ ಮಾಡಿ. ಅವಳ ಉಂಗುರವನ್ನು ಅಪಹರಿಸಿಕೊಂಡು ಹೋಗಿ ಸೇನಾಧಿಪತಿಗೆ ಕೊಟ್ಟಳು.

ಸೇನಾಧಿಪತಿ ಸ್ವದೇಶಕ್ಕೆ ಪ್ರಯಾಣಮಾಡಿ ಸುದರ್ಶನ ರಾಜನಿಗೆ ಸುಮಿತ್ರೆಯ ಉಂಗುರವನ್ನು ಕೊಟ್ಟು, ಅವಳ ಹುಟ್ಟುಮಚ್ಚೆಯ ರಹಸ್ಯವನ್ನೂ ತಿಳಿಸಿದನು. ಅಪವಾದವು ರುಜುವಾದುದರಿಂದ ಸುಬುದ್ಧಿಗೆ ಮರಣದಂಡನೆ ನಿಶ್ಚಯವಾಯಿತು.

ಸುಬುದ್ಧಿ ರಾಜನ ಹತ್ತಿರ ಒಂದೇ ಒಂದು ಕೊನೇಕೋರಿಕೆ ಕೇಳಿದನು: "ನಾನು ಈ ದೂರ ದೇಶದಲ್ಲಿ ಸಾಯುವ ಮೊದಲು ಒಂದುಸಾರಿ ನನ್ನ ತಂಗಿಯನ್ನು ನೋಡಬೇಕೆಂದಿದೆ. ಅವಳನ್ನು ಕರೆಯಿಸಲು ತಮ್ಮ ದೂತರನ್ನು ಕಳುಹಿಸುವಷ್ಟು ದಯೆ ತೋರಿಸಬೇಕು. ಆಮೇಲೆ ನಾನು ನಿಶ್ಚಿಂತೆಯಿಂದ ಮರಣದಂಡನೆ ಅನುಭವಿಸುತ್ತೇನೆ." ಇದಕ್ಕೆ ಸುದರ್ಶನನು ಒಪ್ಪಿದನು. ಸುಬುದ್ಧಿ ತನ್ನ



ತಂಗಿಗೆ ಒಂದು ಪತ್ರ ಬರೆದು ಸುದರ್ಶನನ ದೂತರ ಮೂಲಕ ಕಳುಹಿಸಿದನು. ಆ ಪತ್ರವನ್ನು ನೋಡಿ ಸುಮಾತಿ, ತಾನು ಯಾವಳೋ ಅಜ್ಜಮ್ಮನಿಂದ ಮೋಸಹೋದುದನ್ನು ನೆನೆದು, ಅಣ್ಣನನ್ನು ನೋಡಲು ಹೊರಟಳು.

ಸುದರ್ಶನನ ರಾಜ್ಯಕ್ಕೆ ತಲಪಿದ ಕೂಡಲೇ, ಅವಳು ನೆಟ್ಟಗೆ ರಾಜನ ಬಳಿಗೇ ಹೋಗಿ, "ಮಹಾ ಪ್ರಭುಗಳೇ. ಈ ಕರ್ಣಾಭರಣವನ್ನು ನೋಡಿ ನನಗೆ ನ್ಯಾಯ ದಯಪಾಲಿಸಬೇಕು" ಎಂದು ಒಂದು ಕರ್ಣಾಭರಣವನ್ನು ರಾಜನಿಗೆ ತೋರಿಸಿ, "ಇದು ಒಳ್ಳೆಯ ಬೆಲೆಬಾಳುವ ವಸ್ತು ತಾನೇ ?" ಎಂದು ಕೇಳಿದಳು.

ರಾಜನು ಅದನ್ನು ಪರೀಕ್ಷಿಸಿ. "ಹೌದು. ಅಮೂಲ್ಯವಾದುದೇ. ನನಗೆ ತೋರಿಸುವ ಉದ್ದೇಶವೇನು ?" ಎಂದು ಕೇಳಿದನು.

"ತಮ್ಮ ಸೇನಾಧಿಪತಿಯವರು ಇದರ ಇನ್ನೊಂದು ಜತೆಯನ್ನು ಕದ್ದು ತಂದಿದ್ದಾರೆ. ಧರ್ಮಸ್ವರೂಪರಾದ ತಾವು ಅದನ್ನು ಅವರಿಂದ ನನಗೆ ಕೊಡಿಸಬೇಕು" ಎಂದಳು ದೀನಳಾಗಿ.

ರಾಜನು ಸೇನಾಧಿಪತಿಯನ್ನು ಕರೆಯಿಸಿ, ಸುಮಿತ್ರೆಯ ಆರೋಪಣೆಯನ್ನು ಅವನಿಗೆ ಹೇಳಿ, "ನೀನು ಅವಳ ಕರ್ಣಾಭರಣವನ್ನು ಕದ್ದುಕೊಂಡೆಯಂತೆ. ಅದನ್ನು ಕೂಡಲೇ ಅವಳಿಗೆ ಕೊಟ್ಟುಬಿಡು" ಎಂದನು.

ಸೇನಾಧಿಪತಿ ತುಂಬ ಬೆರಗಾಗಿ ಸುಮಿತ್ರೆಯನ್ನು ನೋಡಿ, "ಪ್ರಭೂ ! ಅಸಲು ಇವಳು ಯಾರೆಂದೇ ನನಗೆ ಗೊತ್ತಿಲ್ಲ. ನನ್ನ ಜನ್ಮದಲ್ಲಿ ಇವಳ ಮುಖವನ್ನೇ ನೋಡಿದವನಲ್ಲ. ಇವಳ ಕರ್ಣಾಭರಣ ಕದ್ದುಕೊಳ್ಳುವುದೆಲ್ಲಿಂದ ಬಂತು ?" ಎಂದನು.

ಕೂಡಲೆ ಸುಮಿತ್ರೆ ರಾಜನ ಕಡೆಗೆ ತಿರುಗಿ, "ಪಭುಗಳೇ ! ನಾನು ಸುಬುದ್ಧಿಯ ತಂಗಿಯಾದ ಸುಮಿತ್ರೆ. ನನ್ನನ್ನು ನಿಮ್ಮ ಸೇನಾಧಿಪತಿ ಈ ಜನ್ಮದಲ್ಲಿ ನೋಡಿಲ್ಲವೆನ್ನುತ್ತಾನೆ. ಹೀಗಿರುವಾಗ ತಾವು ನನ್ನ ಅಣ್ಣನಿಗೆ ಮರಣದಂಡನೆ ಕೊಡುವ ಅಗತ್ಯವೇನು ಬಂತು ?" ಎಂದು ಕೇಳಿದಳು.

ಅವಳ ಕೆದರಿದ ತಲೆಗೂದಲಿನೆಡೆಯಲ್ಲಿ ತಾನು ನೋಡಿದ ಚಿತ್ರಸುಂದರಿಯ ಹೋಲಿಕೆ ಇರುವುದನ್ನು ಸುದರ್ಶನನು ಕಂಡನು. ತನ್ನ ಸೇನಾಧಿಪತಿ ಮಾಡಿದ ಮೋಸವೂ ಸುಮಿತ್ರೆ ಮಾಡಿದ ಯುಕ್ತಿಯೂ ಈಗ ಸುದರ್ಶನನಿಗೆ ಅರ್ಥವಾಯಿತು. ಅವನು ತನ್ನ ಸೇನಾಧಿಪತಿಗೆ ಮರಣಧಂಡನೆ ವಿಧಿಸಿ, ಸುಬುದ್ಧಿಯನ್ನು ಬಿಡುಗಡೆಗೊಳಿಸಿ ಗೌರವಿಸಿದನು. ಅನಂತರ ಬಹಳ ವೈಭವದಿಂದ ಸುಮಿತ್ರೆಗೆ ಸುದರ್ಶನ ರಾಜನೊಂದಿಗೆ ಮದುವೆಯಾಯಿತು.





# ಸ್ಥಲಪ್ರಭಾವ

ಒಂದು ಊರಿನಲ್ಲಿ ಚಂದ್ರಹಾಸನೆಂಬ ಹುಡುಗನಿಗೆ ಚಿಕ್ಕಂದಿನಿಂದಲೂ ತಾನು ರಾಜನಾಗಬೇಕೆಂಬ ಆಸೆ ಯಿದ್ದಿತು. ಅದಕ್ಕೆ ತಕ್ಕ ಹಾಗೆ ಅವನ ಬುದ್ಧಿ ಅಂತಹ ವಿದ್ಯೆಗಳ ಮೇಲೆಯೇ ಹರಿಯಿತು. ರಾಜನಿಗೆ ಬೇಕಾದ ಎಲ್ಲಾ ಬಗೆಯ ವಿದ್ಯೆಗಳನ್ನೂ ಅಭ್ಯಾಸ ಮಾಡಿದನು. ಕೆಲಮಂದಿ ಯುವಕರ ಗುಂಪಿನ ವಿಶ್ವಾಸವನ್ನು ಗಳಿಸಿ ಕೊಂಡು ಕ್ರಮೇಣ ಅವರನ್ನು ತನ್ನ ಅನುಚರರನ್ನಾಗಿ ಮಾಡಿಕೊಂಡನು.

ಯಾವುದಾದರೊಂದು ನಿರ್ಜನಪ್ರಾಂತದಲ್ಲಿ ಒಂದು ನಗರವನ್ನು ನಿರ್ಮಿಸಿ, ಅದಕ್ಕೆ ತಾನು ರಾಜನಾಗ ಬೇಕೆಂದು ಚಂದ್ರಹಾಸನ ಕೋರಿಕೆ. ಈ ಕೋರಿಕೆಯನ್ನು ತನ್ನ ಪುರೋಹಿತರ ಮುಂದೆ ಬಯಲುಮಾಡಿದನು. "ರಾಜಧಾನಿಯಾಗುವಂತಹ ಪ್ರದೇಶದಲ್ಲಿ ಏನಾದರೂ ಸ್ಥಲ ಪ್ರಭಾವವಿರಬೇಕು. ಅದು ಯಾವ ಸ್ಥಳ ದಲ್ಲಿರುವುದೋ ಪರೀಕ್ಷಿಸಬೇಕು" ಎಂದರು ಪುರೋ ಹಿತರು. ಚಂದ್ರಹಾಸನು ಅಂತಹ ಸ್ಥಳವನ್ನು ಹುಡುಕ ತೊಡಗಿದನು. ಕಟ್ಟಕಡೆಗೆ ಒಂದು ಸ್ಥಳವು ವಿಶೇಷ ರೀತಿಯದಾಗಿ ಕಣ್ಣಿಗೆ ಬಿತ್ತು. ಅವನು ನೋಡುತ್ತಿದ್ದ ಹಾಗೆ ಕೆಲವು ಬೇಟೇ ನಾಯಿಗಳು ಒಂದು ಮೊಲಗಳ ಗುಂಪನ್ನು ಓಡಿಸುತ್ತಾ ಬಂದುವು. ಆ ಪ್ರದೇಶಕ್ಕೆ ಮುಟ್ಟಿದ ಕೂಡಲೇ ಮೊಲಗಳು ಒಮ್ಮೆಗೇ ಹಿಂದಿರುಗಿ ಬೇಟೇ ನಾಯಿಗಳ ಮೇಲೆ ತಿರುಗಿಬಿದ್ದುವು. ಬೇಟೇ ನಾಯಿಗಳು ಹೆದರಿ ಓಡಿಹೋದುವು. ಅದೇ ಒಳ್ಳೆಯ ವೀರ ಪ್ರಭಾವವಿರುವ ಸ್ಥಳವೆಂದು ನಿಶ್ಚಯಿಸಿ, ಚಂದ್ರಹಾಸನು ಅಲ್ಲಿಯೇ ತನ್ನ ರಾಜಧಾನಿಯನ್ನು ಕಟ್ಟಿಸಿ, ಅದಕ್ಕೆ ಶಶಕನಗರವೆಂದು ಹೆಸರಿಟ್ಟನು. ಚಂದ್ರಹಾಸನು ಆ ನಗರದ ರಾಜನಾಗಿ ಮೆರೆಯು ತ್ತಿರಲು, ಆ ನಗರದ ಮೇರೆಯಲ್ಲೇ ಇದ್ದ ಲವಂಗ ದೇಶದ ರಾಜನಿಗೆ ಸಿಟ್ಟುಬಂತು. ಚಂದ್ರಹಾಸನು ತನ್ನ ರಾಜ್ಯದ ಮೇರೆಯನ್ನು ಆಕ್ರಮಿಸಿದನೆಂಬ ಹೆಳೆಯಲ್ಲಿ ಅವನು ಯುದ್ಧಕ್ಕೆ ಬಂದನು. ಆಗ ಶಶಕ ನಗರವು ದುರ್ಭೇದ್ಯವಾಗಿ ನಿರ್ಮಿ[illegible]ಾಗಿತ್ತು. ಕೋಟೆ ಯೊಳಗಿನ ಸೈನಿಕರು ಸ್ವಲ್ಪ ಸಂ[illegible]ೇ ಆದರೂ, ತಮಗೆ ಅಪಜಯವಿಲ್ಲವೆಂಬ ನಂಬಿಗೆಯಿಂದ ಅವರು ನಿಶ್ಚಿಂತರಾಗಿದ್ದರು. ಕಡೆಗೆ ಲವಂಗ ದೇಶದ ರಾಜನು ಸೋತು ಹಿಂದಿರುಗಿದನು.

ಕಾಲಕ್ರಮದಲ್ಲಿ ಶಶಕ ನಗರದ ರಾಜ್ಯದ ಸರಹದ್ದಿ ನಲ್ಲಿರುವ ದೇಶಗಳು ಚಂದ್ರಹಾಸನಿಗೇ ವಶವಾಗಿ

ಅಲ್ಲಿಯ ರಾಜರೆಲ್ಲಾ ಸೋತುಹೋದರು. ಹೀಗೆ ಶಶಕ ಸಾಮ್ರಾಜ್ಯವು ವಿಸ್ತರಿಸಿ ಚಂದ್ರಹಾಸನು ಚಕ್ರ ವರ್ತಿಯಾದನು.

ಚಂದ್ರಹಾಸನ ಮಗ ಪದ್ಮಸೇನನು ಸರಿಯಾಗಿ ವಿದ್ಯಾಭ್ಯಾಸಮಾಡದೆ ತಿರುಗೂಳಿಯಾಗಿ, ಪ್ರಾಯಕ್ಕೆ ಬಂದ ಸಮಯಕ್ಕೆ ಎಲ್ಲಾ ಬಗೆಯ ದುರ್ಲಕ್ಷಣ ಗಳನ್ನೂ ಪಡೆದವನಾದವನು. ಈ ಸ್ಥಿತಿಯಲ್ಲಿ ಚಂದ್ರ ಹಾಸನು ಅಕಸ್ಮಾತ್ತಾಗಿ ಹೃದಯಸ್ತಂಭನದಿಂದ ತೀರಿ ಹೋದನು. ಅನಂತರ ರಾಜನಾದ ಪದ್ಮಸೇನನಿಗೆ ರಾಜ್ಯಪಾಲನೆಯ ಬಾಧ್ಯತೆಗಳನ್ನು ನಿರ್ವಹಿಸು ವಂತಹ ಸಾಮರ್ಥ್ಯವು ಸ್ವಲ್ಪವೂ ಇರಲಿಲ್ಲ. ಮುಂದೆ ಏನಾಗುವುದೋ ಎಂದು ಸ್ವತಃ ಅವನೇ ಭಯಪಡ ತೊಡಗಿದನು. "ಶಶಕ ನಗರಕ್ಕೆ ಸ್ಥಲ ಪ್ರಭಾವ ಚೆನ್ನಾಗಿದೆ. ಆದ್ದರಿಂದ ನನಗೇನೂ ಭಯವಿಲ್ಲ" ಎಂದು ತನಗೆ ತಾನೇ ಸಮಾಧಾನ ಪಟ್ಟುಕೊಂಡಿದ್ದನು. ಮಂತ್ರಿಯೂ ಹಾಗೆಯೇ ಧೈರ್ಯ ಹೇಳಿದನು.

ತಮ್ಮ ಚಕ್ರವರ್ತಿ ಕೇವಲ ಅಸಮರ್ಥನೆಂದು ಸಾಮಂತರಾಜರಿಗೆಲ್ಲ ತಿಳಿದುಹೋಯಿತು. ಲವಂಗ ದೇಶದ ಸಾಮಂತನು ದೊಡ್ಡ ಸೇನೆಯೊಂದಿಗೆ ಶಶಕ ನಗರದ ಮೇಲೆ ದಂಡೆತ್ತಿ ಬಂದನು. ಆಗ ನಡೆದ ಯುದ್ಧದಲ್ಲಿ ಪದ್ಮಸೇನನು ಪರಿಪೂರ್ಣವಾಗಿ ಸೋತು ಕಾಡಿನೊಳಗೆ ಓಡಿಹೋದನು.

"ಸ್ಥಲ ಪ್ರಭಾವದಿಂದ ರಾಜ್ಯವನ್ನು ಸಂಪಾದಿಸಿ, ನನ್ನ ತಂದೆ ಚಕ್ರವರ್ತಿಯಾದನು. ಮೊಲಗಳಿಂದ ಬೇಟೆ ನಾಯಿಗಳನ್ನು ಓಡಿಸಿದ ಈ ಸ್ಥಲ ಪ್ರಭಾವವು ನನ್ನನ್ನು ಕಾಪಾಡಲಾರದೆ ಹೋಯಿತೇಕೋ? ನಾನು ಮೊಲಗಳಿಗಿಂತಲೂ ಅಸಮರ್ಥನಾದೆನೆ?" ಎಂದು ಪದ್ಮಸೇನನು ವ್ಯಸನಪಟ್ಟನು.

ಅವನಿಗೆ ಸಮಾಧಾನ ಹೇಳುವ ಉದ್ದೇಶದಲ್ಲಿ ಮಂತ್ರಿಯ ಮಗನು, "ಚಿಂತಿಸಬೇಡಿ ಪ್ರಭುವೆ. ನೀವು ಸೋತುಹೋಗಲಿಕ್ಕೆ ಕಾರಣ ಅದೇ ಸ್ಥಲ ಪ್ರಭಾವವೇ ಹೊರತು ನಿಮ್ಮ ಅಸಮರ್ಥತೆ ಅಲ್ಲವೇ ಅಲ್ಲ. ಅಲ್ಲಿಯವರೆಗೆ ಮೊಲಗಳನ್ನು ಓಡಿಸಿಕೊಂಡು ಬಂದ ಬೇಟೆ ನಾಯಿಗಳು, ಆ ಸ್ಥಳಕ್ಕೆ ಮುಟ್ಟಿದ ಕೂಡಲೇ ಹಿಂದಿರುಗಿ ಓಡಿದುವೆಂದರೆ; ಮೊಲಗಳಿಗೆ ಧೈರ್ಯ ವನ್ನು ಕೊಟ್ಟ ಸ್ಥಳವೇ ಬೇಟೆ ನಾಯಿಗಳಿಗೆ ಅಧೈರ್ಯ ವನ್ನೂ ಕೊಟ್ಟಿತು. ನೀವು ಮಹಾ ಪರಾಕ್ರಮಿ ಗಳಾದುದರಿಂದಲೇ ಸ್ಥಲ ಪ್ರಭಾವವು ನಿಮ್ಮ ಪರಾ ಕ್ರಮವನ್ನು ನಾಶಮಾಡಿತು. ಮೊಲಗಳಂತಹ ಲವಂಗ ದೇಶದ ರಾಜನು ಗೆದ್ದನು" ಎಂದನು.

ಸ್ಥಲ ಪ್ರಭಾವವು ಎರಡು ಬದಿಹರಿತವಿರುವ ಕತ್ತಿ. ಅದನ್ನು ನಂಬಿಕೊಂಡಿರುವುದಕ್ಕಿಂತ, ಮನುಷ್ಯರ ಶಕ್ತಿ ಸಾಮರ್ಥ್ಯಗಳನ್ನೇ ನಂಬುವುದು ಒಳ್ಳೆಯದೆಂದು ಪದ್ಮಸೇನನಿಗೆ ಗೊತ್ತಾಯಿತು.






ಒಂದು ಊರಿನಲ್ಲಿ ವೆಂಕಟಾಚಲಯ್ಯ ಎಂಬ ಗೃಹಸ್ಥನಿದ್ದನು. ಸುಜಾತ ಎಂಬ ಅವನ ಮಗಳಿಗೆ ಮದುವೆಯಾಯಿತು. ಅವಳನ್ನು ಇನ್ನೂ ಸಂಸಾರ ನಡೆಸಲು ಗಂಡನ ಮನೆಗೆ ಕಳುಹಿಸಿರಲಿಲ್ಲ.

ಅಷ್ಟರಲ್ಲಿ ಸಂಕ್ರಾಂತಿ ಹಬ್ಬ ಬಂದುದರಿಂದ ವೆಂಕಟಾಚಲಯ್ಯ ತನ್ನ ಅಳಿಯನನ್ನೂ, ಬಾವನೆಂಟ ಸುಬ್ಬಯ್ಯನನ್ನೂ ತನ್ನ ಮನೆಗೆ ಬರಬೇಕೆಂದು ಆಹ್ವಾನಿಸಿದನು. ಅದರಂತೆ ಸುಬ್ಬಯ್ಯ ತನ್ನ ಹೆಂಡತಿಯನ್ನೂ ಮಗನನ್ನೂ ಕರೆದುಕೊಂಡು ವೆಂಕಟಾಚಲಯ್ಯನ ಮನೆಗೆ ಬಂದನು.

ವೆಂಕಟಾಚಲಯ್ಯ ಸಾಕಷ್ಟು ಐಶ್ವರ್ಯವಂತನಾದುದರಿಂದ ಅವನ ಮನೆಯೂ ವಠಾರವೂ ದೊಡ್ಡದಾಗಿತ್ತು. ಮನೆ ತುಂಬಾ ಕೆಲಸದಾಳುಗಳಿದ್ದರು. ಕರೆದ ಕೂಡಲೇ ಹಾಜರಾಗುತ್ತಿದ್ದರು. ಅಂತೆಯೇ ವೆಂಕಟಾಚಲಯ್ಯ ತನ್ನ ನೆಂಟರಿಗೆ ತುಂಬಾ ಚೆಂದಾಗಿ ಮರ್ಯಾದೆ ತೋರಿಸಿ ಉಪಚಾರ ಮಾಡಿದನು.

ಮಾರಣೇ ದಿನ ಬೆಳಿಗ್ಗೆ ಸುಬ್ಬಯ್ಯ ನಿದ್ದೆಯಿಂದೇಳುವಾಗ ಮನೆಯ ಹಿಂದಿನ ವಠಾರದಲ್ಲಿ ಏನೋ ಗಲಾಟೆ ನಡೆಯುವಂತೆ ಕೇಳಿಸಿತು. ಮೊದಲು ಆ ಗೊಡವೆ ತನಗೇಕೆ ಎಂದುಕೊಂಡು ಸುಮ್ಮನಿದ್ದನು. ಆದರೆ ಬರುಬರುತ್ತ ಗಲಾಟೆ ಜೋರುಜೋರಾಗುವುದನ್ನು ನೋಡಿ, ಆ ಕಡೆಗೆ ಬಗ್ಗಿ ನೋಡಿದನು. ಅಲ್ಲಿ ವೆಂಕಟಾಚಲಯ್ಯ ಕೆಲಸದಾಳುಗಳ ಮೇಲೆ ಆವೇಶದಿಂದ ಬೈದಾಡಿಕೊಂಡಿದ್ದ.

ಆದರೆ ಕೆಲಸದಾಳುಗಳು ವೆಂಕಟಾಚಲಯ್ಯನನ್ನು ಸ್ವಲ್ಪವೂ ಲಕ್ಷಿಸುವಂತೆ ಕಾಣಲಿಲ್ಲ. ಅವರು ನಿರ್ಭಿಡೆಯಿಂದ ಉತ್ತರಕ್ಕೆ ಪ್ರತ್ಯುತ್ತರ ಕೊಡುತ್ತಿದ್ದರು. ಅದರಿಂದ ವೆಂಕಟಾಚಲಯ್ಯನ ಸಿಟ್ಟು ಕಾವೇರುತ್ತಿತ್ತು.

ಇಷ್ಟೊಂದು ಸಂಪನ್ನನಾದ ಯಜಮಾನನ ಮೇಲೆ ಆಳುಗಳಿಗೆ ಭಯಭಕ್ತಿಗಳಿಲ್ಲದಿರುವುದನ್ನು ನೋಡಿ ಸುಬ್ಬಯ್ಯನಿಗೆ ಆಶ್ಚರ್ಯವಾಯಿತು. ಕಡೆಗೆ ವೆಂಕಟಾಚಲಯ್ಯನ ಹೆಂಡತಿ ಬಂದು ಆ ಜಗಳದಲ್ಲಿ ತಲೆ ಹಾಕಿ ಸಮಾಧಾನಪಡಿಸದಿದ್ದರೆ ಅದು ಇನ್ನೂ ಎಷ್ಟು ಹೊತ್ತು ನಡೆಯುತ್ತಿತ್ತೋ!

"ಮನೆಯಲ್ಲಿ ನೆಂಟರು ಬಂದಿರುವಾಗ ಹೀಗೆಲ್ಲಾ ಜಗಳಾಡುವುದು ಎಷ್ಟು ಅಸಹ್ಯ!" ಎಂದು ಅವಳು ವೆಂಕಟಾಚಲಯ್ಯನೊಡನೆ ಹೇಳಿದುದನ್ನು ಸುಬ್ಬಯ್ಯನು ಕೇಳಿದನು.

ಕೆ. ರಾಧಾಮಣಿ

ಸ್ವಲ್ಪ ಹೊತ್ತಿಗೆ ವೆಂಕಟಾಚಲಯ್ಯ ಸುಬ್ಬಯ್ಯನ ಬಳಿಗೆ ಬಂದು, "ಈ ಆಳುಗಳದೇ ದೊಡ್ಡ ತಲೆ ನೋವು ಬಾವಯ್ಯಾ! ಸೋಮಾರಿಗಳು! ಸರಿಯಾಗಿ ಕೆಲಸಮಾಡದೆ ಕೇಳಿದರೆ ಎದುರುತ್ತರ ಕೊಡುತ್ತಾರೆ. ಇವರನ್ನು ಸಮಾಳಿಸಿಕೊಳ್ಳಬೇಕಾದರೆ ಸಾಕುಸಾಕಾಗಿ ಹೋಗುತ್ತದೆ. ಛೆ ಛೆ!" ಎಂದನು.

ತಪ್ಪು ವೆಂಕಟಾಚಲಯ್ಯನಲ್ಲೇ ಇರುವಂತೆ ಸುಬ್ಬಯ್ಯ ಆಗಲೇ ಗ್ರಹಿಸಿದ್ದನು. ಕೆಲಸದವರು ಆಯಾ ಕೆಲಸ ನೆಮ್ಮದಿಯಾಗಿ ಮಾಡಲು ಬಿಡದೆ ಅದಕ್ಕೂ ಇದಕ್ಕೂ ಕರೆಯುತ್ತ, ಆ ಮೇಲೆ ಸರಿಯಾಗಿ ಮಾಡಿಲ್ಲವೆಂದು ಬೈಯುತ್ತ, ಅವರಿಗೆ ತನ್ನ ಮೇಲೆ ಗೌರವವಿಲ್ಲದ ಹಾಗೆ ಮಾಡಿಕೊಂಡಿರುವನೆಂದು ಸುಬ್ಬಯ್ಯನಿಗೆ ಗೊತ್ತಾಯಿತು. ಅದನ್ನು ಬಾಯಿ ಬಿಟ್ಟು ಹೇಳಿ ತೋರಿಸಲಿಕ್ಕಾಗದೆ, "ಹೌದು ಹೌದು!" ಎಂದಷ್ಟೇ ಹೇಳಿ ಸುಮ್ಮನಾದನು.

ಸುಬ್ಬಯ್ಯನು ಒಳ್ಳೆಯ ಲೌಕಿಕ ಜ್ಞಾನವುಳ್ಳವನು. ಲಕ್ಷಾಧಿಕಾರಿಯಲ್ಲದಿದ್ದರೂ ಬಡವನೇನಲ್ಲ. ಅವನ ಮನೆಯಲ್ಲಿ ಕೂಡಾ ಮೂರು ನಾಲ್ಕು ಮಂದಿ ಸೇವಕರಿದ್ದರು. ಅವರೊಂದಿಗೆ ಅವನಿಗೆ ಯಾವ ತಕರಾರೂ ಉಂಟಾಗುತ್ತಿರಲಿಲ್ಲ. ಅವರ ಮೇಲೆ ಕೆಟ್ಟ ಮಾತುಗಳನ್ನು ಉಪಯೋಗಿಸಲಿಕ್ಕೂ ಅವನಿಗೆ ತಿಳಿಯದು. ಆದುದರಿಂದ ಆಳುಕಾಳುಗಳಿಗೆ ತಮ್ಮ ಯಜಮಾನನ ಮೇಲೆ ಭಯಭಕ್ತಿಗಳೂ ಇದ್ದುವು.

ಸುಬ್ಬಯ್ಯ ಆ ಮನೆಯಲ್ಲಿದ್ದ ನಾಲ್ಕು ದಿನಗಳೂ ವೆಂಕಟಾಚಲಯ್ಯ ಕೆಲಸದಾಳುಗಳ ಮೇಲೆ ರೇಗಾಡುತ್ತಲೇ ಇದ್ದನು. ಹೇಗಾದರೂ ಮಾಡಿ ತನ್ನ ಬಾವಯ್ಯನನ್ನು ಸರಿಯಾದ ರೀತಿಗೆ ಮಾರ್ಪಡಿಸಬೇಕೆಂದು ಸುಬ್ಬಯ್ಯನಿಗೆ ತೋರಿತು.

ಹಬ್ಬದ ಗೌಜಿ ಮುಗಿದು ತಾನು ತನ್ನ ಸೊಸೆಯನ್ನು ಕರೆದುಕೊಂಡು ಹೋಗುವಾಗ, ಸುಬ್ಬಯ್ಯ ವೆಂಕಟಾಚಲಯ್ಯನನ್ನೂ ಅವನ ಹೆಂಡತಿಯನ್ನೂ ತನ್ನ ಮನೆಗೆ ಆಹ್ವಾನಿಸಿದನು. ವೆಂಕಟಾಚಲಯ್ಯನೂ ಅದನ್ನು ಸ್ವೀಕರಿಸಿದನು. ಸುಬ್ಬಯ್ಯನ ಮನೆ ವೆಂಕಟಾಚಲಯ್ಯನ ಮನೆಯಷ್ಟು ದೊಡ್ಡದಲ್ಲದಿದ್ದರೂ



ಎಲ್ಲದಕ್ಕೂ ಸೌಕರ್ಯವಿರುವ ಅಚ್ಚುಕಟ್ಟಾದ ಶುಭ್ರವಾದ ಮನೆ. ಗೃಹಾಲಂಕರಣಗಳೂ ಚೆನ್ನಾಗಿದ್ದುವು. ಮನೆಯ ಮುಂದೆ ಹೂವಿನ ತೋಟವೂ, ಹಿಂಭಾಗದಲ್ಲಿ ತರಕಾರಿ ಗಿಡಗಳೂ ಇದ್ದುವು. ಅದನ್ನೆಲ್ಲ ನೋಡಿಕೊಳ್ಳುವವರು ಕೆಲಸದಾಳುಗಳೇ. ಅವರೆಲ್ಲ ಮನೆಯವರ ಹಾಗೆಯೇ ಅತಿಥಿಗಳನ್ನು ತುಂಬಾ ಮರ್ಯಾದೆಯಿಂದ ನೋಡುತ್ತ ಮನೆಗೆ ಸಂಬಂಧಿಸಿದವರಂತೆಯೇ ಪ್ರವರ್ತಿಸುತ್ತಿದ್ದರು. ಯಜಮಾನರಿಗೂ ಕೆಲಸದಾಳುಗಳಿಗೂ ಘರ್ಷಣೆ ಬರುವುದನ್ನು ವೆಂಕಟಾಚಲಯ್ಯನಾಗಲೀ, ಅವನ ಹೆಂಡತಿಯಾಗಲೀ ಅಲ್ಲಿ ನೋಡಲಿಲ್ಲ. ಆಳುಕಾಳುಗಳು ತಮ್ಮ ಯಜಮಾನರ ಮೇಲೆ ಅಷ್ಟು ವಿಧೇಯತೆ ತೋರಿಸಲು ಏನು ಕಾರಣವೋ ಎಂದು ವೆಂಕಟಾಚಲಯ್ಯನಿಗೆ ಆಶ್ಚರ್ಯವೇ ಆಯಿತು.

ಒಂದು ದಿನ ಸುಬ್ಬಯ್ಯ ತನ್ನ ಕೋಣೆಯಲ್ಲಿ ವೆಂಕಟಾಚಲಯ್ಯನೊಂದಿಗೆ ಮಾತಾಡುತ್ತ, ಆ ಕೋಣೆಯ ಕಸವನ್ನು ಇನ್ನೂ ಬಳಿಯಲಿಲ್ಲವೆಂಬ ಸಂಗತಿಯನ್ನು ಗಮನಿಸಿದನು. ಆಳುಗಳ ಮೇಲೆ ಸ್ವಲ್ಪ ಕೋಪ ಕೂಡಾ ಬಂದಿತು. ಆದರೆ ಯಾರನ್ನೂ ಕರೆದು ಕೂಗಾಡಲಿಲ್ಲ.

ಅಷ್ಟರಲ್ಲಿ ಒಬ್ಬ ಸೇವಕ ಆ ಕಡೆಗೆ ಬಂದನು. "ಎಲೋ, ಆ ಬೀರುವನ್ನು ಅಲ್ಲಿಂದ ಕದಲಿಸಿ ಮುಂದಿನ ಕೋಣೆಯಲ್ಲಿ ಇಡಬೇಕು. ಅರೆ, ಈ ಕೋಣೆ ಬಳಿಯಲೇ ಇಲ್ಲವೆ?" ಎಂದು ಹೇಳುತ್ತ, ಆದರ ಪಕ್ಕದಲ್ಲಿದ್ದ ಕಸಪೊರಕೆಯನ್ನು ತಾನೇ ತೆಗೆದುಕೊಂಡು ಕೋಣೆಯ ಕಸವನ್ನು ಬಳಿಯತೊಡಗಿದನು.

ಕೂಡಲೇ ಕೆಲಸದವನು, "ಅಯ್ಯ ಅಯ್ಯಾ! ನೀವು ಗುಡಿಸುವುದೆಂದರೇನ್ರೀ! ಏನೋ ಕೆಲಸದಲ್ಲಿ ಈ ಕೋಣೆಯ ಕಸಬಳಿಯಲು ಮರೆತುಹೋಯಿತು. ಕ್ಷಮಿಸಿರಿ!" ಎಂದು ಯಜಮಾನನ ಕೈಯಿಂದ ಪೊರಕೆಯನ್ನು ತೆಗೆದುಕೊಂಡು ಅವನೇ ಗುಡಿಸಿದನು.

ಈ ಒಂದು ಸಂದರ್ಭವೇ ಸುಬ್ಬಯ್ಯನಿಗೆ ಬೇಕಾಗಿತ್ತು. ವೆಂಕಟಾಚಲಯ್ಯ ಸುಬ್ಬಯ್ಯನ ಶಾಂತ ಭಾವವನ್ನು ಗ್ರಹಿಸಿ, "ಬಾವಯ್ಯ! ಒಂದು ನೋಡಿದರೆ ಕೆಲಸದಾಳುಗಳಿಗಿಂತ ನಾವೇ ಹೆಚ್ಚು ಜಾಣತನದಿಂದ ಪ್ರವರ್ತಿಸಬೇಕು ಅಂತ ಈಗ ಅರ್ಥ ಮಾಡಿಕೊಂಡೆ. ಅವರಿಗೆ ಮಾತಿನಲ್ಲಿ ಹೇಳುವುದಕ್ಕಿಂತ ಕೃತಿಯಲ್ಲಿ ಹೇಳುವುದೇ ಒಳ್ಳೆಯದು. ಆಗ ಆಳುಗಳು ಹೆಚ್ಚು ತಪ್ಪುಮಾಡಲಾರರು. ಅಲ್ಲವೆ ?" ಎಂದನು.

"ಹೌದು ಬಾವಯ್ಯಾ. ಕೆಲಸದಾಳುಗಳನ್ನು ಇಟ್ಟುಕೊಳ್ಳುವುದು ದೊಡ್ಡದಲ್ಲ. ಕೆಲಸಮಾಡಿಸಿಕೊಳ್ಳುವುದರಲ್ಲಿದೆ. ಅವರೂ ನಮ್ಮ ಹಾಗೇ ಅಂದುಕೊಂಡರೆ ಹೆಚ್ಚು ಘರ್ಷಣೆ ಬಾರದು" ಎಂದನು ಸುಬ್ಬಯ್ಯ ನಗುತ್ತ.





# ಋಣಮುಕ್ತಿ

ಒಂದು ಊರಿನಲ್ಲಿ ಒಬ್ಬ ಚರ್ಮಕಾರನಿದ್ದನು. ಅವನು ಕಷ್ಟಪಟ್ಟು ಕೆಲಸ ಮಾಡುತ್ತ, ಮಿತವಾಗಿ ಖರ್ಚುಮಾಡುತ್ತ ಸಾಧ್ಯವಾದಷ್ಟು ಹಣವನ್ನು ಉಳಿಸುತ್ತಾ ಇದ್ದನು. ಮಗಳಿಗೆ ಮದುವೆಯ ಖರ್ಚಿಗೋಸ್ಕರವೇ ಅವನು ಹಣ ಉಳಿಸುವ ಉದ್ದೇಶ.

ಕಡೆಗೆ ಮಗಳಿಗೆ ಒಂದು ಸಂಬಂಧವೂ ಕೂಡಿ ಬಂತು. ಇನ್ನು ಎರಡು ದಿನಗಳಿಗೆ ಮದುವೆಯ ಮುಹೂರ್ತವೆಂದಿರುವಾಗ, ಆ ಚರ್ಮಕಾರನ ಮನೆಗೆ ಕಳ್ಳರು ನುಗ್ಗಿ, ಹಣವನ್ನೆಲ್ಲಾ ದೋಚಿಕೊಂಡು ಹೋದರು. ಆ ಬಡವನಿಗೆ ಇದಕ್ಕಿಂತ ಹೆಚ್ಚಿನ ದುಃಖ ವೇನಿದ್ದೀತು ? ಅವನು ದುಃಖವನ್ನು ತಾಳಲಾರದೆ ಹೊರಳಿ ಹೊರಳಿ ಅಳತೊಡಗಿದನು.

ಆ ಸಮಯಕ್ಕೆ ಆ ದಾರಿಯಾಗಿ ಭೂಪೇಂದ್ರನೆಂಬ ಧನಿಕ ರೈತನು ಬಂದು, ಚರ್ಮಕಾರನ ದುಃಖದ ಪರಿಸ್ಥಿತಿಯನ್ನೆಲ್ಲ ತಿಳಿದುಕೊಂಡು, "ಹೆದರಬೇಡ. ನೀನು ಕಳೆದುಕೊಂಡ ಹಣ ನಾನು ಕೊಡುತ್ತೇನೆ. ಮಗಳ ಮದುವೆ ಮುಗಿಸು. ಆದರೆ ನಾನು ಕೊಟ್ಟ ಸಾಲವನ್ನು ಮಾತ್ರ ಬೇಗನೇ ಹಿಂದಿರುಗಿಸಿ ಕೊಟ್ಟು ಬಿಡಬೇಕು," ಎಂದನು.

ಭೂಪೇಂದ್ರನನ್ನು ಆ ಊರಿನವರೆಲ್ಲರೂ ನರ ರೂಪದ ರಾಕ್ಷಸನೆಂದೇ ಹೇಳುತ್ತಿದ್ದರು. ಅಂಥವನು ಆ ಕ್ಷಣದಲ್ಲಿ ಚರ್ಮಕಾರನ ಕಣ್ಣಿಗೆ ದೇವರ ಪ್ರತಿರೂಪವಾಗಿ ಕಂಡುಬಂದನು. ಅವನು ಆನಂದ ಪಾರವಶ್ಯತೆಯಿಂದ ಭೂಪೇಂದ್ರನ ಕಾಲು ಹಿಡಿದು, "ಅಯ್ಯಾ, ನನ್ನ ಚರ್ಮದಿಂದ ಚಪ್ಪಲಿ ಹೊಲಿದು ಕೊಟ್ಟಾದರೂ ನಿಮ್ಮ ಋಣ ತೀರಿಸುತ್ತೇನೆ ! ಮರೆಯಲಾರೆ" ಎಂದು ಹೇಳಿಕೊಂಡನು.

"ಈಗ ಹೇಳಿದ ಮಾತು ನೆನಪಿಟ್ಟುಕೋ ! ಗ್ರಾಮಾಧಿಕಾರಿಗಳ ಎದುರಿನಲ್ಲೇ ಹಣ ಕೊಡುತ್ತೇನೆ, ಬಾ" ಎಂದ ಭೂಪೇಂದ್ರ.

ಅದರಂತೆ ಗ್ರಾಮಾಧಿಕಾರಿಯ ಎದುರಿನಲ್ಲಿ ಪತ್ರ ಬರೆಯಿಸಿ, ಚರ್ಮಕಾರನಿಂದ ಬೆರಳು ಮುದ್ರೆ ಹಾಕಿಸಿಕೊಂಡು ಭೂಪೇಂದ್ರನು ಹಣ ಕೊಟ್ಟನು. ಚರ್ಮಕಾರನು ಮಗಳಿಗೆ ಮದುವೆಯನ್ನೂ ಮಾಡಿ ಮುಗಿಸಿದನು.

ಅದೆಲ್ಲಾ ಮುಗಿದು ಹತ್ತು ದಿನಗಳ ಮೇಲೆ ಭೂಪೇಂದ್ರನು, ಚರ್ಮಕಾರನ ಬಳಿಗೆಹೋಗಿ ತಾನು ಕೊಟ್ಟ ಹಣವನ್ನು ಹಿಂದೆ ಕೊಡಬೇಕೆಂದು ಕೇಳಿದನು.

ಷೇಕ್ ಗಾಲಿಬ್

"ಹತ್ತೇ ದಿನಗಳಲ್ಲಿ ಅಷ್ಟು ಹಣ ನಾನು ಹೇಗೆ ಸೇರಿಸಲಿ ದೊರೆಗಳೇ ?" ಎಂದ ಚರ್ಮಕಾರ.

"ಅದೆಲ್ಲಾ ನನಗೆ ಗೊತ್ತಿಲ್ಲ. ಕೇಳಿದ ಕೂಡಲೇ ಹಿಂದಿರುಗಿ ಕೊಡುತ್ತೇನೆಂದು ನೀನು ಒಪ್ಪಿಕೊಂಡಿದ್ದೀ. ನಾಳೆಯೊಳಗೆ ನನ್ನ ಪೂರ್ತಿ ಹಣವನ್ನು ನೀನು ವಾಪಾಸು ಕೊಡದೇ ಹೋದರೆ ನಿನ್ನ ಹೆಂಡತಿ ಮಕ್ಕಳ ಕೈಯಿಂದ ನನ್ನ ಮನೆಯಲ್ಲಿ ಬಿಟ್ಟಿ ಚಾಕರಿ ಮಾಡಿಸಿಕೊಳ್ಳುತ್ತೇನೆ. ಅದಾವುದೂ ಆಗದಿದ್ದರೆ ನಿನ್ನ ಚರ್ಮದಿಂದ ನನಗೆ ಚಪ್ಪಲಿಯಾದರೂ ಹೊಲಿದು ಕೂಡಲೇ ಬೇಕು" ಎಂದು ಒತ್ತಿ ಹೇಳಿ ಭೂಪೇಂದ್ರನು ಹೊರಟು ಹೋದನು.

ಚರ್ಮಕಾರನಿಗೆ ಮತ್ತೆ ಕೊರಳಿಗೆ ಹಗ್ಗದುರುಳು ಸಿಕ್ಕಿಕೊಂಡ ಹಾಗಾಯಿತು. ಅವನು ಸಂಕಟಪಡುವುದನ್ನು ನೋಡಿ ಅಕ್ಕಪಕ್ಕದವರು, "ನೀನು ಗ್ರಾಮಾಧಿಕಾರಿಗಳ ಎದುರಿನಲ್ಲಿ ತಾನೇ ಹಣಪಡೆದಿದ್ದಿ? ಅವರ ಹತ್ತಿರವೇ ಹೋಗಿ ಆಲೋಚನೆ ಕೇಳು. ಅವರು ಒಳ್ಳೆಯವರು," ಎಂದರು.

ಚರ್ಮಕಾರನು ಗ್ರಾಮಾಧಿಕಾರಿಯ ಬಳಿಗೆ ಹೋಗಿ, ಭೂಪೇಂದ್ರನು ಹೇಳಿದುದನ್ನೆಲ್ಲಾ ಹೇಳಿ, "ಇಷ್ಟು ಬೇಗ ಹಣ ಕೇಳಿದರೆ ನಾನೆಲ್ಲಿಗೆ ಹೋಗಲಿ? ಕಳ್ಳತನಮಾಡಬೇಕು ಅನ್ನುವಿರಾ? ಅಲ್ಲಾ ಅವರ ಮನೆಯ ಬಿಟ್ಟಿ ಚಾಕರಿ ಮಾಡೆನ್ನುವಿರಾ? ಮುಳುಗುತ್ತಿರುವ ನನ್ನನ್ನು ಹೇಗೆ ಬದಿಗೆ ಸೇರಿಸುವಿರೋ, ನಿಮ್ಮದೇ ಭಾರ ಸ್ವಾಮಿ!" ಎಂದು ಮೊರೆಯಿಟ್ಟನು.

ಗ್ರಾಮಾಧಿಕಾರಿಗೆ ಭೂಪೇಂದ್ರನ ಸ್ವಭಾವ ಗೊತ್ತು. ಅಂತೆಯೇ ಚರ್ಮಕಾರನ ಮೇಲೆ ಮನಸ್ಸು ಕರಗಿತು. ಅವನು ಸ್ವಲ್ಪ ಆಲೋಚಿಸಿ, ಚರ್ಮಕಾರನಿಗೆ ಒಂದು ಆಲೋಚನೆಯನ್ನು ಹೇಳಿದನು:

"ಅದೆಲ್ಲಾ ಸಾಧ್ಯವಿಲ್ಲವೆಂದು ತಕರಾರಿಗೆ ಬಂದರೆ ನಾನೇನು ಮಾಡಲಿ ಸ್ವಾಮಿ?" ಎಂದು ಸಂಶಯದಿಂದ ಕೇಳಿದ ಚರ್ಮಕಾರ.

"ಹಾಗೇನಾದರೂ ತಕರಾರು ತೆಗೆದರೆ ನನ್ನ ಹತ್ತಿರ ಕರೆಕೊಂಡು ಬಾ. ಸಾಕ್ಷ್ಯಕ್ಕೆ ನಿನ್ನ ಬಾವನೆಂಟನನ್ನೂ ಕರೆಕೊಂಡು ಬಾ" ಎಂದನು ಗ್ರಾಮಾಧಿಕಾರಿ.



"ಹತ್ತೇ ದಿನಗಳಲ್ಲಿ ಅಷ್ಟು ಹಣ ನಾನು ಹೇಗೆ ಸೇರಿಸಲಿ ದೊರೆಗಳೇ ?" ಎಂದ ಚರ್ಮಕಾರ.

"ಅದೆಲ್ಲಾ ನನಗೆ ಗೊತ್ತಿಲ್ಲ. ಕೇಳಿದ ಕೂಡಲೇ ಹಿಂದಿರುಗಿ ಕೊಡುತ್ತೇನೆಂದು ನೀನು ಒಪ್ಪಿಕೊಂಡಿದ್ದೀ. ನಾಳೆಯೊಳಗೆ ನನ್ನ ಪೂರ್ತಿ ಹಣವನ್ನು ನೀನು ವಾಪಾಸು ಕೊಡದೇ ಹೋದರೆ ನಿನ್ನ ಹೆಂಡತಿ ಮಕ್ಕಳ ಕೈಯಿಂದ ನನ್ನ ಮನೆಯಲ್ಲಿ ಬಿಟ್ಟಿ ಚಾಕರಿ ಮಾಡಿಸಿಕೊಳ್ಳುತ್ತೇನೆ. ಅದಾವುದೂ ಆಗದಿದ್ದರೆ ನಿನ್ನ ಚರ್ಮದಿಂದ ನನಗೆ ಚಪ್ಪಲಿಯಾದರೂ ಹೊಲಿದು ಕೊಡಲೇ ಬೇಕು" ಎಂದು ಒತ್ತಿ ಹೇಳಿ ಭೂಪೇಂದ್ರನು ಹೊರಟು ಹೋದನು.

ಚರ್ಮಕಾರನಿಗೆ ಮತ್ತೆ ಕೊರಳಿಗೆ ಹಗ್ಗದುರುಳು ಸಿಕ್ಕಿಕೊಂಡ ಹಾಗಾಯಿತು. ಅವನು ಸಂಕಟಪಡುವುದನ್ನು ನೋಡಿ ಅಕ್ಕಪಕ್ಕದವರು, "ನೀನು ಗ್ರಾಮಾಧಿಕಾರಿಗಳ ಎದುರಿನಲ್ಲಿ ತಾನೇ ಹಣಪಡೆದಿದ್ದಿ? ಅವರ ಹತ್ತಿರವೇ ಹೋಗಿ ಆಲೋಚನೆ ಕೇಳು. ಅವರು ಒಳ್ಳೆಯವರು," ಎಂದರು.

ಚರ್ಮಕಾರನು ಗ್ರಾಮಾಧಿಕಾರಿಯ ಬಳಿಗೆ ಹೋಗಿ, ಭೂಪೇಂದ್ರನು ಹೇಳಿದುದನ್ನೆಲ್ಲಾ ಹೇಳಿ, "ಇಷ್ಟು ಬೇಗ ಹಣ ಕೇಳಿದರೆ ನಾನೆಲ್ಲಿಗೆ ಹೋಗಲಿ? ಕಳ್ಳತನಮಾಡಬೇಕು ಅನ್ನುವಿರಾ? ಅಲ್ಲಾ ಅವರ ಮನೆಯ ಬಿಟ್ಟಿ ಚಾಕರಿ ಮಾಡೆನ್ನುವಿರಾ? ಮುಳುಗುತ್ತಿರುವ ನನ್ನನ್ನು ಹೇಗೆ ಬದಿಗೆ ಸೇರಿಸುವಿರೋ, ನಿಮ್ಮದೇ ಭಾರ ಸ್ವಾಮಿ!" ಎಂದು ಮೊರೆಯಿಟ್ಟನು.

ಗ್ರಾಮಾಧಿಕಾರಿಗೆ ಭೂಪೇಂದ್ರನ ಸ್ವಭಾವ ಗೊತ್ತು. ಅಂತೆಯೇ ಚರ್ಮಕಾರನ ಮೇಲೆ ಮನಸ್ಸು ಕರಿಗಿತು. ಅವನು ಸ್ವಲ್ಪ ಆಲೋಚಿಸಿ, ಚರ್ಮಕಾರನಿಗೆ ಒಂದು ಅಲೋಚನೆಯನ್ನು ಹೇಳಿದನು:

"ಅದೆಲ್ಲಾ ಸಾಧ್ಯವಿಲ್ಲವೆಂದು ತಕರಾರಿಗೆ ಬಂದರೆ ನಾನೇನು ಮಾಡಲಿ ಸ್ವಾಮಿ?" ಎಂದು ಸಂಶಯದಿಂದ ಕೇಳಿದ ಚರ್ಮಕಾರ.

"ಹಾಗೇನಾದರೂ ತಕರಾರು ತೆಗೆದರೆ ನನ್ನ ಹತ್ತಿರ ಕರಕೊಂಡು ಬಾ. ಸಾಕ್ಷ್ಯಕ್ಕೆ ನಿನ್ನ ಬಾವನೆಂಟನನ್ನೂ ಕರೆಕೊಂಡು ಬಾ" ಎಂದನು ಗ್ರಾಮಾಧಿಕಾರಿ.



ಭೂಪೇಂದ್ರನು ತಾನು ಹೇಳಿದಂತೆ ಒಂದು ದಿನ ಕಾದು ನೋಡಿದನು. ಆಮೇಲೆ ಪತ್ರವನ್ನು ತೆಗೆದುಕೊಂಡು ಗ್ರಾಮಾಧಿಕಾರಿಯ ಬಳಿಗೆ ಹೋದನು.

ಗ್ರಾಮಾಧಿಕಾರಿ ಭೂಪೇಂದ್ರನ ಫಿರ್ಯಾದಿಯನ್ನು ಆಗಲೇ ಕೇಳಿದವನಂತೆ ನಟಿಸಿ, ಚರ್ಮಕಾರನನ್ನು ಕರೆಯಿಸಿ, "ಏನೋ, ಕೇಳಿದ ಕೂಡಲೇ ಹಣ ಕೊಡುತ್ತೇನೆಂದು ಒಪ್ಪಿಕೊಂಡು, ಮಾತು ತಪ್ಪಿರುವೆ. ಈಗ ಇವರ ಮನೆಯಲ್ಲಿ ನೀವೆಲ್ಲಾ ಬಿಟ್ಟೀ ಚಾಕರಿ ಮಾಡುವಿರಾ, ನಿನ್ನ ಮನೆಯನ್ನು ಮಾರಿ ಹಣ ಕೊಡುವಿಯಾ? ಅದಾವುದೂ ಸಾಧ್ಯವಿಲ್ಲದಿದ್ದರೆ ನಿನ್ನ ಚರ್ಮದಿಂದ ಇವರಿಗೆ ಒಂದು ಜತೆ ಚೆಪ್ಪಲಿ ಹೊಲಿದು ಕೊಡುವಿಯಾ?" ಎಂದು ಕೇಳಿದನು.

"ನನ್ನ ಚರ್ಮದಿಂದ ಚೆಪ್ಪಲಿಯನ್ನೇ ಹೊಲಿದು ಕೊಡುತ್ತೇನೆ ಸ್ವಾಮಿ!" ಎಂದ ಚರ್ಮಕಾರ.

"ಅದಕ್ಕೆ ನಿಮಗೆ ಒಪ್ಪಿಗೆ ತಾನೇ?" ಎಂದು ಗ್ರಾಮಾಧಿಕಾರಿ ಭೂಪೇಂದ್ರನನ್ನು ಕೇಳಿದನು.

"ಆಗಲಿ, ಒಪ್ಪಿದ್ದೇನೆ" ಎಂದ ಭೂಪೇಂದ್ರ. ಕೂಡಲೇ ಚರ್ಮಕಾರನು ತನ್ನ ಮೂಟೆಯನ್ನು ಬಿಚ್ಚಿ ಒಂದು ಹೊಸ ಚೆಪ್ಪಲಿಯ ಜತೆಯನ್ನು ತೆಗೆದು ಭೂಪೇಂದ್ರನ ಪಾದಗಳ ಮುಂದೆ ಇಟ್ಟು, "ನಿಮ್ಮ ಸಾಲ ಪೂರಾ ತೀರಿತು." ಎಂದನು. ಭೂಪೇಂದ್ರನು ಒಮ್ಮೆಗೇ ಕೋಪಾವೇಶದಿಂದ, "ಎಲೋ, ನಿನ್ನ ಈ ಅತಿಬುದ್ಧಿವಂತಿಕೆಯನ್ನು ನನ್ನ ಮುಂದೆ ತೋರಿಸುವಿಯಾ? ನಿನ್ನ ಚರ್ಮದಿಂದ ಚೆಪ್ಪಲಿ ಹೊಲಿದು ಕೊಡುತ್ತೇನೆಂದು ಹೇಳಿ, ಮಾಮೂಲು ಪ್ರಾಣಿಯ ಚರ್ಮದಲ್ಲಿ ಹೊಲಿದ ಚೆಪ್ಪಲಿ ಕೊಟ್ಟರೆ ನನಗೆ ವ್ಯತ್ಯಾಸ ತಿಳಿಯುವುದಿಲ್ಲವೆಂದುಕೊಂಡೆಯಾ? ನೋಡಿದಿರಾ, ಗ್ರಾಮಾಧಿಕಾರಿಗಳೇ!" ಎಂದನು.

ಗ್ರಾಮಾಧಿಕಾರಿ ಭೂಪೇಂದ್ರನ ಮಾತನ್ನು ಕೇಳಿ ಆಶ್ಚರ್ಯವನ್ನು ನಟಿಸುತ್ತ, "ಇದರಲ್ಲಿ ಇವನ ಅತಿಬುದ್ಧಿವಂತಿಕೆ ಏನಿದೆಯೋ ಗೊತ್ತಾಗಲಿಲ್ಲವಲ್ಲ? ಅವನು ಚೆಪ್ಪಲಿ ಹೊಲಿದು ಕೊಡುವೆನೆಂದದ್ದು ಅವನ ಚರ್ಮದಿಂದಲೇ ಹೊರತು ಅವನ ದೇಹದ ಚರ್ಮದಿಂದ ಹೊಲಿಯುವೆನೆನ್ನಲಿಲ್ಲ! ಆ ಚರ್ಮ ಅವನು ಕೊಂಡುಕೊಂಡದ್ದಾದರೆ ಅವನದೇ ಚರ್ಮ ತಾನೇ? ಅದನ್ನೀಗ ನಿಮಗೆ ಕೊಟ್ಟು ಋಣಮುಕ್ತನಾಗಿದ್ದಾನೆ. ಈ ಸಾರಿ ಕ್ಷಮಿಸಿದ್ದೇನೆ. ಇನ್ನೊಮ್ಮೆ ಜನರನ್ನು ಹೀಗೆ ಪೀಡಿಸಿದರೆ ಸುಮ್ಮನೆ ಬಿಡಲಾರೆ, ಎಚ್ಚರಿಕೆ!" ಎಂದನು ಗ್ರಾಮಾಧಿಕಾರಿ.

ಗ್ರಾಮಾಧಿಕಾರಿಯ ದಯದಿಂದ ಋಣಮುಕ್ತನಾದ ಚರ್ಮಕಾರನು, ಗ್ರಾಮಾಧಿಕಾರಿಗೆ ಒಳ್ಳೆಯ ಚೆಪ್ಪಲಿಯ ಜತೆಯನ್ನು ಕೊಟ್ಟು ತನ್ನ ಕೃತಜ್ಞತೆ ಹೇಳಿಕೊಂಡನು.





# ದೇವೀಭಾಗವತ

ರಂಭ ಮತ್ತು ಕರಂಭ ಎಂಬವರು ದನುವಿನ ಮಗಂದಿರು. ಇವರಿಗೆ ಬಹಳ ಕಾಲದವರೆಗೆ ಮಕ್ಕಳಿಲ್ಲದೆ, ಮಕ್ಕಳ ಆಸೆಯಿಂದ ಅನೇಕ ವರ್ಷಗಳ ವರೆಗೆ ತೀವ್ರ ತಪಸ್ಸು ಮಾಡಿದರು. ಅವರಲ್ಲಿ ಕರಂಭನು ಪಂಚನದ ತೀರ್ಥದಲ್ಲಿ ಮುಳುಗಿಕೊಂಡಿದ್ದು ತಪಸ್ಸು ಮಾಡಿದನು. ರಂಭನು ಒಂದು ಎತ್ತರವಾದ ಮರವನ್ನೇರಿ ತಪಸ್ಸುಮಾಡಿದನು.

ಈ ಸಮಾಚಾರ ಇಂದ್ರನಿಗೆ ಗೊತ್ತಾಯಿತು. ಯಾರು ತಪಸ್ಸಿಗೆ ಕುಳಿತರೂ ಇಂದ್ರನಿಗೆ ಹೆದರಿಕೆಯಾಗಿ ಬೆವರ ತೊಡಗುತ್ತದೆ. ಅವನು ಮೊಸಳೆಯ ರೂಪದಲ್ಲಿ ಪಂಚನದದೊಳಗೆ ಪ್ರವೇಶಿಸಿ ಕರಂಭನನ್ನು ಕೊಂದುಬಿಟ್ಟನು. ತನ್ನ ತಮ್ಮನು ಸತ್ತುಹೋದುದನ್ನು ನೋಡಿ ರಂಭನು ಶೋಕಾವೇಶದಿಂದ ತನ್ನ ತಲೆಯನ್ನೇ ಕಡಿದು ಅಗ್ನಿಗೆ ಹಾಕಲು ಕೈಯಲ್ಲಿ ಕತ್ತಿಯನ್ನೆತ್ತಿದನು.

ಆಗ ಅಗ್ನಿದೇವನು ಪ್ರತ್ಯಕ್ಷನಾಗಿ, "ಏಕೆ ಆತ್ಮಹತ್ಯ ಮಾಡಿಕೊಳ್ಳುವಿ ? ಅದರಿಂದ ಇಹವೂ ಇಲ್ಲ ಪರವೂ ಇಲ್ಲ. ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ವರ ಕೇಳು. ಕೊಡುತ್ತೇನೆ" ಎಂದನು.

"ದೇವಾ ! ನಿನಗೆ ನನ್ನ ಮೇಲೆ ಅನುಗ್ರಹವಿದ್ದರೆ ನನಗೆ ಒಬ್ಬ ಮಗನನ್ನು ಕೊಡು. ಅವನು ಕಾಮರೂಪಿಯಾಗಿ. ದೇವದಾನವ ಮಾನವರುಗಳನ್ನು ಜಯಿಸುವವನಾಗಿ. ಅವರಾರಿಂದಲೂ ಸೋಲಿಸಲಾಗದವನಾಗಿ ಇರಬೇಕು" ಎಂದನು.

"ಹಾಗೆಯೇ ಆಗಲಿ. ನಿನಗೆ ಯಾವಳ ಮೇಲೆ ಪ್ರೀತಿಯಾಗುವುದೋ ಅವಳಿಂದ ಅಂತಹ ಮಗನೇ ಹುಟ್ಟುತ್ತಾನೆ" ಎಂದು ವರಕೊಟ್ಟು ಅಗ್ನಿಹೋತ್ರನು ಅದೃಶ್ಯನಾದನು.

ರಂಭನು ತಪಸ್ಸು ಮುಗಿಸಿ ಹಿಂದಿರುಗಿ ಬರುತ್ತ, ಯಕ್ಷರ ಅಧೀನದಲ್ಲಿದ್ದ ಒಂದು ಪ್ರದೇಶವನ್ನು ತಲಪಿದನು. ಅತ್ಯಂತ ರಮಣೀಯವಾದ ಆ ವನ ಪ್ರದೇಶದಲ್ಲಿ ಸುಂದರವಾದ ಒಂದು ಎಮ್ಮೆಯನ್ನು ನೋಡಿದನು. ಅವನಿಗೆ ಅದರ ಮೇಲೆ ಪ್ರೀತಿಯೂ ಮೋಹವೂ ಉಂಟಾಯಿತು. ಆ ಮಹಿಷಿಯನ್ನೇ

೧೪. ಮಹಿಷಾಸುರ ವಧೆ



ಪತ್ನಿಯನ್ನಾಗಿ ವರಿಸಿಕೊಂಡು, ಪಾತಾಳಕ್ಕೆ ಕರೆದೊಯ್ದನು. ಆ ಮಹಿಷಿ ಗರ್ಭ ಧರಿಸಿತು.

ಪಾತಾಳದಲ್ಲಿ ಆ ಮಹಿಷಿಯನ್ನು ನೋಡಿ ಮತ್ತೊಂದು ಮಹಿಷವು ಮೋಹಗೊಂಡು ಅದನ್ನು ಆಕ್ರಮಿಸಿತು. ಅದನ್ನು ನೋಡಿ ರಂಭನು ಆಗ್ರಹಾವೇಶದಿಂದ ಆ ಮಹಿಷವನ್ನು ಬಲವಾಗಿ ಹೊಡೆದನು. ಅದರಿಂದ ರೋಷಗೊಂಡ ಆ ಮಹಿಷವು ರಂಭನನ್ನು ತನ್ನ ಕೊಂಬುಗಳಿಂದತಿವಿದು ಮೇಲೆತ್ತಿ ನೆಲಕ್ಕೆ ಅಪ್ಪಳಿಸಿ ಕೊಂದುಬಿಟ್ಟಿತು. ಅದನ್ನು ನೋಡಿ ಮಹಿಷಿ ರಂಭನಿಗಾಗಿ ಚಿತಿಯನ್ನು ಪೇರಿಸಿ ಆ ಚಿಂತಿಯಲ್ಲಿ ತಾನೂ ಬಿದ್ದು ರಂಭನೊಂದಿಗೇ ಸುಟ್ಟುಹೋಯಿತು. ಆ ಚಿತಿಯಿಂದ ಇಬ್ಬರು ರಾಕ್ಷಸರು ಹೊರಟು ಬಂದರು. ಒಬ್ಬನ ಹೆಸರು ಮಹಿಷಾಸುರ, ಇನ್ನೊಬ್ಬನು ರಕ್ತಬೀಜಾಸುರ.

ಪಾತಾಳಲೋಕದಲ್ಲಿದ್ದ ರಾಕ್ಷಸರೆಲ್ಲಾ ಮಹಿಷಾಸುರನನ್ನು ತಮ್ಮ ರಾಜನನ್ನಾಗಿ ಆರಿಸಿಕೊಂಡರು. ಅವನ ಕೈಕೆಳಗೆ ಚಿಕ್ಷರ, ತಾಮ್ರ, ಅಸಿಲೋಮ, ಸುದರ್ಕ, ಬಿಡಾಲ, ಬಾಷ್ಕಲ, ತ್ರಿಣೇತ್ರ, ಕಾಲಬಂಧಕ ಎಂಬ ವೀರಾಧಿವೀರರು ಸೇನಾಪತಿಗಳಾಗಿದ್ದರು. ಅವರ ಸಹಾಯದಿಂದ ಮಹಿಷಾಸುರನು ಭೂಲೋಕವನ್ನೆಲ್ಲಾ ಗೆದ್ದು ತನ್ನಿಚ್ಛೆಯಂತೆ ಆಳತೊಡಗಿದನು. ಯಜ್ಞ ಕರ್ಮಗಳೆಲ್ಲಾ ರಾಕ್ಷಸರಿಂದ ಧ್ವಂಸವಾಗ ತೊಡಗಿದುವು. ಆಮೇಲೆ ಮಹಿಷಾಸುರನು ಕಾಂಚನ ಪರ್ವತದ ಮೇಲೆ ಹೋಗಿ ದೊಡ್ಡ ತಪಸ್ಸುಮಾಡಿ ಬ್ರಹ್ಮದೇವನನ್ನು ಪ್ರತ್ಯಕ್ಷ ಮಾಡಿಕೊಂಡು, "ಮಹಾತ್ಮಾ, ನನಗೆ ಸಾವೇ ಇಲ್ಲದಂತೆ ವರ ಕೊಡು" ಎಂದು ಕೇಳಿದನು.

ಅದಕ್ಕೆ ಬ್ರಹ್ಮನು, "ಹಾಗೆ ವರ ಕೊಡುವುದು ನನ್ನ ಕಾರ್ಯಕ್ಕೆ ವಿರುದ್ಧ. ಹುಟ್ಟಿದವರೆಲ್ಲಾ ಒಂದು ದಿನ ಸಾಯಲೇಬೇಕೆಂಬುದು ನನ್ನ ಮೂಲ ವಿಧಿ. ಸತ್ತವರು ಮತ್ತೆ ಹುಟ್ಟುವುದೂ ಆ ವಿಧಿಯ ಪದ್ಧತಿ. ಹೀಗಿರುವಾಗ ಅಂತಹ ವರ ಕೊಡಲು ಹೇಗೆ ಸಾಧ್ಯ ? ಭೂಮಿಗೂ, ಸಮುದ್ರಕ್ಕೂ, ಬೆಟ್ಟಗಳಿಗೂ ಸಹ ನಾಶವೆಂಬುದು ಇರುವಾಗ, ಜೀವಿಗಳಿಗೆ ಅಂಥ ವರ ಹೇಗೆ ದಕ್ಕೀತು? " ಎಂದನು.

ಆಗ ಮಹಿಷನು, "ಹಾಗಾದರೆ ದೇವದಾನವ ಮಾನವರೊಳಗೆ ಯಾವ ಪುರುಷರಿಂದಲೂ ನನಗೆ ಮರಣ ಬಾರದಂತೆ ವರ ಕೊಡು" ಎಂದು ಕೇಳಿದನು.

"ಹಾಗೆಯೇ ಕೊಟ್ಟಿದ್ದೇನೆ. ನಿನ್ನ ತಂದೆಯೂ ನಿನಗಾಗಿ ಈ ವರವನ್ನೇ ಪಡೆದಿದ್ದಾನೆ" ಎಂದು ನುಡಿದು ಬ್ರಹ್ಮನು ಅಂತರ್ಧಾನನಾದನು. ಅಬಲೆಯರಾದ ಸ್ತ್ರೀಯ ಮೂಲಕ ತನಗೆ ಸಾವು ಬರಬಾರದೆಂಬ ಯೋಚನೆ ಮಹಿಷನಿಗೆ ಬರಲಿಲ್ಲ. ಹೀಗೆ ವರವನ್ನು ಪಡೆದು ಮದೋನ್ಮತ್ತನಾಗಿ ಬಂದ ಮಹಿಷಾಸುರನು, ಒಬ್ಬ ಸೇವಕನನ್ನು ಕರೆದು, "ನೀನು ಸ್ವರ್ಗಕ್ಕೆಹೋಗಿ ಸುಮ್ಮನೆ ಯುದ್ಧಮಾಡಿ ಸೋಲುವುದು ಬೇಡವೆಂದು ಇಂದ್ರನಿಗೆ ಹೇಳು.

ಸ್ವರ್ಗಲೋಕವನ್ನು ನನ್ನ ಕೈಗೆ ಒಪ್ಪಿಸಲು ಹೇಳು. ಬಲವಿದೆ ಎಂಬ ನಂಬುಗೆಯಿದ್ದರೆ ಯುದ್ಧಕ್ಕೇ ಬರಲಿ: ಸಂಧಾನ ಮಾಡಲಿಲ್ಲವೆಂಬ ಅಪವಾದ ನನಗೆ ಬೇಡ" ಎಂದು ಹೇಳಿ ಕಳುಹಿಸಿದನು.

ಮಹಿಷಾಸುರನ ದೂತನು ಸ್ವರ್ಗಲೋಕಕ್ಕೆ ಹೋಗಿ ಇಂದ್ರನನ್ನು ನೋಡಿ. "ಎಲೈ ದೇವೇಂದ್ರನೇ! ನಾನು ಮಹಿಷಾಸುರನ ದೂತನು. ಆತನು ನನ್ನ ಮೂಲಕ ನಿನಗೆ ಹೀಗೆ ಹೇಳಿ ಕಳುಹಿಸಿದ್ದಾನೆ. ನೀನು ಇಲ್ಲದ ಸಲ್ಲದ ಅತಿಶಯುಗಳಿಗೆ ಹೋಗದೆ. ಅಭಿಮಾನಕ್ಕೆ ಬೀಳದೆ ನಿನ್ನ ನಗರವನ್ನು ಮಹಿಷಾಸುರನ ವಶಕ್ಕೆ ಕೊಟ್ಟು, ಆತನ ಸೇವಕನಾಗಿ ಸುಖವಾಗಿ ಬದುಕು. ಅದಕ್ಕೆ ಇಷ್ಟವಿಲ್ಲದೆ ಯುದ್ಧ ಮಾಡುವಿಯಾದರೆ, ಅಷ್ಟು ಶಕ್ತಿ ನಿನಗಿದೆಯೇ ನೋಡಿಕೊಂಡು ನಿರ್ಣಯಿಸಿ ಹೇಳಿಬಿಡು. ಅದಕ್ಕಾಗಿ ಅವಕಾಶ ಕೇಳಿ ಕಾಲಹರಣ ಮಾಡಲು ಸಾಧ್ಯವಿಲ್ಲ. ಈಗಲೇ ಹೇಳಿಬಿಡು" ಎಂದನು.

"ಎಲೋ ಮದಾಂಧನಾದ ರಾಕ್ಷಸಾಧಮ! ನಿನ್ನ ಯಜಮಾನನ ಕಣ್ಣುಗಳು ನೆತ್ತಿಗೇರಿದುವೇನು? ನನ್ನ ಇದಿರಿಗೇ ಬಂದು ನನ್ನ ಮುಂದೆ ಹೀಗೆ ಹೇಳುವೆಯಾ? ಅವನ ಸಂಗತಿಯನ್ನು ನಾನು ನೋಡಿಕೊಳ್ಳುತ್ತೇನೆ. ನೀನು ದೂತನಾದುದರಿಂದ ಬದುಕಿ ಉಳಿದಿರುವಿ! ತಿರುಗಿ ಹೋಗಿ ನಾನು ಹೇಳಿದೆನೆಂದು ಹೀಗೆ ಹೇಳು. ಎಲೋ ಹರಾಮಿ ಕೋಣನೇ! ಯುದ್ಧದಲ್ಲಿ ನನ್ನನ್ನು ಜಯಿಸಬೇಕೆಂಬ ಕೋರಿಕೆ ಹುಟ್ಟಿತೇನು ನಿನಗೆ? ಕಂಡಕಂಡ ಹಾಗೆ ಹುಲ್ಲು ಮೇದು ವಿಪರೀತ ಕೊಬ್ಬು ಬೆಳೆಯಿತೇನು? ನಿನ್ನ ದೊಡ್ಡ ದೊರಟು ಸ್ವರೂಪ ಎಲ್ಲಾ ನನಗೆ ಗೊತ್ತು. ನಿನ್ನ ಕೊಂಬುಗಳನ್ನು ಕಿತ್ತು ಧನುಸ್ಸು ಮಾಡಿಕೊಳ್ಳುತ್ತೇನೆ. ಬಾ ನನ್ನ ಮುಂದೆ" ಎಂದು ಹೇಳಿ ದೂತನನ್ನು ಕಳುಹಿಸಿದನು ದೇವೇಂದ್ರ.



ದೂತನು ಮಹಿಷಾಸುರನ ಬಳಿಗೆ ಹಿಂದಿರುಗಿ, ದೇವೇಂದ್ರನ ಸಂದೇಶವನ್ನು ತನ್ನ ಒಡೆಯನೊಂದಿಗೆ ಹೇಳಿದನು.

ಅದನ್ನು ಕೇಳಿ ಮಹಿಷಾಸುರನಿಗೆ ತಾಳಲಾಗದಷ್ಟು ಕೋಪ ಬಂತು. ಆತನು ಬಾಲವನ್ನು ಜಾಡಿಸಿ. ಕೆಂಪಾದ ಕಣ್ಣುಗಳನ್ನು ತಿರುಗಿಸುತ್ತ "ಈ ಇಂದ್ರನ ಗರ್ವವಾದರೂ ಎಷ್ಟದು? ಅವನು ನನಗೊಂದು ಹುಲ್ಲಿಗೆ ಸಮ. ಅವನ ಪ್ರತಾಪವೆಲ್ಲಾ ಮತ್ತಗೆ ತಪಸ್ಸು ಮಾಡುವವರ ಮೇಲೆಯೂ, ಇನ್ನೊಬ್ಬರ ಹೆಂಡಿರ ಮೇಲೆಯೂ ತೋರಿಸಲಿಕ್ಕಾದೀತು! ನಿಜವಾದ ಯುದ್ಧವೆಂದರೆ, ಅಪ್ಸರೆಯರನ್ನು ಕಳುಹಿಸಿ ಮುನಿಗಳ ತಪೋಭಂಗ ಮಾಡುವುದು ಅಂದುಕೊಂಡಿದ್ದಾನೆ. ನನ್ನ ವಿಷಯ ಗೊತ್ತಿದೆಯಂತೆ! ಕೋಟಿಮಂದಿ ಇಂದ್ರರು ಬಂದರೂ ಸೀಳಿ ಚೆಂಡಾಡುತ್ತೇನೆ. ನಮುಚಿಯನ್ನು ಕೊಂದ ವಿಶ್ವಾಸಘಾತುಕ! ಅವನನ್ನು ಕ್ಷಮಿಸಿದರೆ ಬುದ್ಧಿ



ವಂತರು ಸಂತೋಷಿಸಲಾರರು. ಇವನೇ ಹೀಗೆಂದು ಕೊಂಡರೆ, ಇವನಿಗೆ ಸಹಾಯಮಾಡುವ ಆ ವಿಷ್ಣು ಕೂಡಾ ಇವನಂಥವನೇ! ಮೋಸದಿಂದ ಹಂದಿ ರೂಪದಲ್ಲಿ ಹಿರಣ್ಯಾಕ್ಷನನ್ನು ಕೊಂದನು. ಸಿಂಹ ರೂಪದ ಮನುಷ್ಯನಾಗಿ ಹಿರಣ್ಯಕಶಿಪುವನ್ನು ಕೊಂದನು! ಅವನನ್ನು ಆಮೇಲೆ ನೋಡುತ್ತೇನೆ. ಈ ಇಂದ್ರನ ಕಥೆ ಮುಗಿಸುತ್ತೇನೆ ಮೊದಲು!" ಎಂದು ಗುಡುಗುಡಿಸಿದನು.

ಮೊದಲು ಅಷ್ಟದಿಕ್ಪಾಲಕರನ್ನೂ ದೇವತೆಗಳನ್ನೂ ಜಯಿಸಿ, ಅವರು ಅನುಭವಿಸುವ ಸುಖಗಳನ್ನೆಲ್ಲ ರಾಕ್ಷಸರಿಗೆ ಹಂಚಿಕೊಡಲು ನಿಶ್ಚಯಿಸಿ ಮಹಿಷಾಸುರನು ತನ್ನ ಸೇವಕರೊಂದಿಗೆ, "ನನ್ನನ್ನು ಯಾವ ಗಂಡುಗಲಿಯೂ ಜಯಿಸಲಾರನು. ನೀವು ಎಲ್ಲೆಲ್ಲಿರುವ ಎಲ್ಲಾ ರಾಕ್ಷಸರನ್ನೂ ಕರೆದು ಯುದ್ಧಕ್ಕೆ ಸಿದ್ಧಗೊಳಿಸಿರಿ. ಎಷ್ಟು ಮಂದಿ ಶತ್ರುಗಳಿದ್ದರೂ ನನಗೆ ಇದಿರಲ್ಲ. ಕೇವಲ ನನ್ನ ಗೊರಸುಗಳಿಂದಲೂ-ಕೊಂಬುಗಳಿಂದಲೂ ಕೊಂದು ಹಾಕಬಲ್ಲೆ. ನಿಮ್ಮೆಲ್ಲರಿಗೂ ಸ್ವರ್ಗ ಸುಖಗಳು ಸಿಗುತ್ತವೆ" ಎಂದು ಹೇಳಿ ಉಬ್ಬಿಸಿ ಕಳುಹಿಸಿದನು.

ಇಷ್ಟರಲ್ಲಿ ದೇವೇಂದ್ರನು ದಿಕ್ಪಾಲಕರನ್ನೆಲ್ಲಾ ಸಮಾವೇಶಗೊಳಿಸಿ ಅವರೊಂದಿಗೆ ಹೀಗೆಂದನು: "ರಂಭಾಸುರನ ಮಗನಾದ ಮಹಿಷಾಸುರನು ಬ್ರಹ್ಮದೇವನಿಂದ ವರವನ್ನು ಪಡೆದು, ಮದೋನ್ಮತ್ತನಾಗಿ ಯುದ್ಧಕ್ಕೆ ಸೇನೆಗಳನ್ನು ತಯಾರಿಸುತ್ತ ಜಂಬ ಕೊಚ್ಚಿಕೊಳ್ಳುತ್ತಿದ್ದಾನೆ. ಅವನು ಸ್ವರ್ಗಲೋಕವನ್ನು ಜಯಿಸುತ್ತಾನಂತೆ. ಮಹಿಷನಿಗೆ ಸೇವಕನಾಗಿರುವೆಯೋ ಯುದ್ಧಮಾಡಿ ಸೋಲುವಿಯೋ ಎಂದು ನನಗೆ ಸವಾಲು ಕೊಡಿಸಿದ್ದಾನೆ. ನಾನೂ ಕಠಿಣವಾದ ಪ್ರತ್ಯುತ್ತರ ಹೇಳಿ ಕಳುಹಿಸಿದ್ದೇನೆ. ಇದನ್ನೆಲ್ಲ ಆಲೋಚನೆ ಮಾಡಿ ನಾವೇನು ಮಾಡಬೇಕೆಂಬುದನ್ನು ಹೇಳಿರಿ. ಶತ್ರುವಾದವನು ಎಷ್ಟೇ ಬಲವಂತನಾದರೂ ಕ್ಷಮಿಸಿ ಬಿಡಬಾರದು. ಜಯಾಪಜಯಗಳು ದೈವಾಧೀನವೇ ಆದರೂ ಪ್ರಯತ್ನವನ್ನು ಬಿಡಕೂಡದು. ಸಂಧಿ ಮಾಡಿಕೊಳ್ಳುವುದು ಒಳ್ಳೆಯದಾದರೂ ಇಂತಹ ಮದಾಂಧರೊಂದಿಗೆ ಸಂಧಿ ಕೂಡಾ ವಿಷಮಿಸುತ್ತದೆ. ಯುದ್ಧ ಮಾಡಬೇಕಾದರೂ ಶತ್ರುವಿನ ಬಲವನ್ನೂ ನಮ್ಮ ಬಲವನ್ನೂ ಗಣಿಸಿ ತೂಗಿ ನೋಡಬೇಕಾಗಿದೆ. ಅದಕ್ಕಾಗಿ ಒಬ್ಬ ಮನುಷ್ಯನನ್ನು ಕಳುಹಿಸೋಣವೆಂದು ನನ್ನ ಅಭಿಪ್ರಾಯ."

ಎಲ್ಲರೂ ಒಪ್ಪಿದ ಮೇಲೆ, ಇಂದ್ರನು ಒಬ್ಬ ಮನುಷ್ಯನನ್ನು ಗೂಢಚಾರನಾಗಿ, ಶತ್ರುವಿನ ಕಡೆಗೆ ಕಳುಹಿಸಿದನು. ಆತನು ಹಿಂದಿರುಗಿ ಬಂದು ಮಹಿಷಾಸುರನ ಬಲಗಳ ವಿವರಣೆಗಳನ್ನು ಹೇಳಿದುದನ್ನು ಕೇಳಿ, ಇಂದ್ರನು ವಿಸ್ಮಯಗೊಂಡು, ತನ್ನ ಪುರೋಹಿತನನ್ನು ನೋಡಿ, "ಮಹಿಷಾಸುರನು ಅಂತ್ಯವಿಲ್ಲದಷ್ಟು ಸೇನೆಯನ್ನು ಸಾಗಿಸಿಕೊಂಡು

ನಮ್ಮ ಮೇಲೆ ಯುದ್ಧಕ್ಕೆ ಬರುತ್ತಾನಂತೆ. ಏನು ಉಪಾಯ ? " ಎಂದು ಕೇಳಿದನು.

ಇಂದ್ರನ ಗಾಬರಿಯನ್ನು ನೋಡಿ ದೇವ ಪುರೋಹಿತನಾದ ಬೃಹಸ್ಪತಿ, " ಅಪಾಯವು ಇದಿರಾದಾಗ ಧೈರ್ಯವನ್ನು ಬಿಟ್ಟು ಬಿಡಬಾರದು. ಯಾವುದಕ್ಕೂ ಎದೆಗೆಡದೆ ಧೈರ್ಯವಾಗಿರು. ಆಗುವುದು ಆಗದೇ ಇರುವುದಿಲ್ಲ. ಆದರೂ ಸಾಧ್ಯವಾದಷ್ಟು ಪ್ರಯತ್ನ ಮಾಡಲೇಬೇಕು. ನಾವು ಪ್ರಯತ್ನ ಮಾಡಿದರೂ ಫಲಿತವು ಸಿಗದಿದ್ದರೆ ಅದು ದೈವಿಕವೆನಿಸುತ್ತದೆ " ಎಂದನು.

" ಅದು ನಿಜವೇ ಅನ್ನಿ ಗುರುಗಳೇ. ಪ್ರಯತ್ನಿಸದಿದ್ದರೆ ಯಾವ ಕೆಲಸವೂ ಆಗುವುದಿಲ್ಲ. ಯತಿಗಳಿಗೆ ವಿಜ್ಞಾನವೂ, ಬ್ರಾಹ್ಮಣರಿಗೆ ತೃಪ್ತಿಯೂ ಹೇಗೆ ಮುಖ್ಯವೋ ರಾಜರಿಗೆ ಶತ್ರು ಸಂಹಾರವೂ ಹಾಗೆಯೇ ಮುಖ್ಯ. ನೀವು ಅನುಕೂಲವಾಗಿ ಆಲೋಚನೆ ಹೇಳಿದರೆ, ನಾನು ಯುದ್ಧದ ಪ್ರಯತ್ನ ಮಾಡುತ್ತೇನೆ. ನನಗೆ ನೀವೂ, ವಜ್ರಾಯುಧವೂ, ಹರಿಹರರೂ ಸಹಾಯಕರಾಗಿರುವವರಲ್ಲವೆ ? " ಎಂದನು ದೇವೇಂದ್ರ

ಬೃಹಸ್ಪತಿ ಇಂದ್ರನನ್ನು ನೋಡಿ. " ನಾನು ನಿನಗೆ ಯುದ್ಧಮಾಡುವಂತೆಯೂ ಹೇಳಲಾರೆ, ಬೇಡವೆಂತಲೂ ಹೇಳಲಾರೆ. ನನ್ನನ್ನು ನೀವೆಲ್ಲಾ ಮಹಾ ಮೇಧಾವಿ ಎನ್ನುವಿರಿ. ಆದರೆ ಚಂದ್ರನು ನನ್ನ ಹೆಂಡತಿಯನ್ನು ಎತ್ತಿಕೊಂಡು ಹೋದಾಗ, ನನ್ನ ಮೇಧಾವಿತನ ಯಾವ ಕೆಲಸಕ್ಕೆ ಬಂತು ? ಆದುದರಿಂದ ಈ ಸಂದರ್ಭದಲ್ಲಿ ನಿಮ್ಮ ನಿಮ್ಮ ಬುದ್ಧಿಗೆ ತೋರಿದ ಉಪಾಯಗಳನ್ನು ನೀವೇ ಆಲೋಚಿಸಿಕೊಳ್ಳಿ " ಎಂದನು. ಆಮೇಲೆ ಇಂದ್ರನು ಬ್ರಹ್ಮನ ಬಳಿಗೆ ಹೋಗಿ ಶರಣಾಗತನಾಗಿ, " ದೇವ ದೇವಾ ! ಮಹಿಷಾಸುರನೆಂಬವನು ಮದೋನ್ಮತ್ತನಾಗಿ ಸ್ವರ್ಗಲೋಕದ ಮೇಲೆ ಸೈನ್ಯ ಸಾಗಿಸಿಕೊಂಡು



ಬರುತ್ತಿದ್ದಾನೆ. ಅವನಿಂದ ನನಗೆ ಬಹಳ ಭಯ ಉಂಟಾಗಿದೆ. ನನ್ನ ದುರವಸ್ಥೆಗೆ ಒಂದು ದಾರಿ ನೀನೇ ತೋರಿಸಬೇಕು ! " ಎಂದು ಪ್ರಾರ್ಥಿಸಿಕೊಂಡನು.

ಇಂದ್ರನ ಮಾತು ಕೇಳಿ ಬ್ರಹ್ಮನು ತಲೆದೂಗುತ್ತ " ಹೌದು. ಆ ಮಹಿಷನ ಸಂಗತಿ ನನಗೆ ಗೊತ್ತಿದೆ. ನಾವು ಶಿವನನ್ನೂ ವಿಷ್ಣುವನ್ನೂ ಬೆಂಬಲಕ್ಕಿಟ್ಟುಕೊಂಡು ಯುದ್ಧ ಮಾಡುವುದು ಒಳ್ಳೆಯದು. ಮೊದಲು ಕೈಲಾಸಕ್ಕೆ ಹೋಗೋಣ " ಎಂದನು.

ಇಂದ್ರನೂ ಬ್ರಹ್ಮನೂ ಕೈಲಾಸಕ್ಕೆ ಹೋಗಿ ಶಿವನನ್ನು ನೋಡಿ ಎಲ್ಲಾ ಸಂಗತಿಯನ್ನೂ ಹೇಳಿದರು. ತರುವಾಯ ಮೂವರೂ ಕೂಡಿ ವಿಷ್ಣುವಿನ ಬಳಿಗೆ ಹೋದರು. ಮೂವರೂ ಕೂಡಿಯೇ ಮಹಿಷಾಸುರನೊಂದಿಗೆ ಯುದ್ಧಮಾಡಬೇಕೆಂದು ನಿರ್ಣಯವಾಯಿತು. ಹಂಸದ ಮೇಲೆ ಬ್ರಹ್ಮನೂ, ಗರುತ್ಮಂತನ ಮೇಲೆ ವಿಷ್ಣುವೂ, ಎತ್ತಿನ ಮೇಲೆ ಶಿವನೂ, ನವಿಲಿನ ಮೇಲೆ



ಕುಮಾರಸ್ವಾಮಿಯೂ, ಆನೆಯ ಮೇಲೆ ಇಂದ್ರನೂ ಏರಿಕೊಂಡು ಯುದ್ಧಕ್ಕೆ ಹೊರಟರು. ಮಹಿಷಾಸುರನ ಸೇನೆಯೂ ಇದಿರಿಸಿಕೊಂಡು ಬಂತು.

ಯುದ್ಧವು ಭಯಂಕರವಾಗಿ ಸಾಗಿತು. ಎಷ್ಟೇ ಶೌರ್ಯ ಪರಾಕ್ರಮಗಳನ್ನು ಪ್ರದರ್ಶಿಸಿದರೂ ದಿಕ್ಪಾಲಕರೂ, ಇಂದ್ರನೂ, ತ್ರಿಮೂರ್ತಿಗಳೂ ಮಹಿಷಾಸುರನ ಧಾವತಿಗೆ ತಡೆದುಕೊಳ್ಳಲಾರದೆ ಹಿಂಜರಿದು ಓಡಲೇ ಬೇಕಾಯಿತು. ಸ್ವರ್ಗವು ಮಹಿಷಾಸುರನ ಕೈ ಸೇರಿತು. ಮಹಿಷನು ಇಂದ್ರನ ಆಸನದ ಮೇಲೆ ಕುಳಿತುಕೊಂಡು, ಎಲ್ಲಾ ಪದವಿಗಳಲ್ಲಿಯೂ ತನ್ನ ರಾಕ್ಷಸರನ್ನು ನಿಯಮಿಸಿ, ದೇವತೆಗಳ ಧನಾಗಾರವನ್ನೆಲ್ಲಾ ಸ್ವಾಧೀನಪಡಿಸಿಕೊಂಡು ಸ್ವರ್ಗ ಸುಖಗಳನ್ನು ಅನುಭವಿಸುತ್ತ ಪಾಲಿಸತೊಡಗಿದನು. ದೇವತೆಗಳು ಗುಡ್ಡಗಳನ್ನೂ, ಗುಹೆಗಳನ್ನೂ ಸೇರಿಕೊಂಡು ಬವಣೆಪಡತೊಡಗಿದರು. ಇಂತಹ ಕಷ್ಟಗಳನ್ನು ಅನುಭವಿಸಿ ಅರಿಯದ, ಅಮರತ್ವ ಪಡೆದ ದೇವತೆಗಳು, ಒಂದುದಿನ ಇಂದ್ರನನ್ನು ಮುಂದಿಟ್ಟುಕೊಂಡು ಬ್ರಹ್ಮನ ಬಳಿಗೆ ಹೋಗಿ, "ಕೇವಲ ಒಬ್ಬ ಕೋಣದಂಥ ರಾಕ್ಷಸನು ನಮ್ಮೆಲ್ಲರನ್ನೂ ಜಯಿಸಿ ನಮಗೆ ಇಂತಹ ದುಸ್ಥಿತಿಯುಂಟುಮಾಡಿದುದನ್ನು ನೋಡುತ್ತಾ, ನಮ್ಮ ತಂದೆಯಾದ ನೀನು ಸುಮ್ಮನಿರುವೆಯಾ? ನಿನ್ನಿಂದಲೇ ಹೀಗಾಯಿತು! ಎಲ್ಲಾ ತಿಳಿದವನಿಗೆ ನಾವೇನು ಹೇಳಬಹುದು? ಇನ್ನು ಮುಂದೆ ನಮ್ಮ ಗತಿ ಏನು?" ಎಂದು ಮೊರೆಯಿಟ್ಟರು.

"ನನ್ನನ್ನು ಏನು ಮಾಡಲು ಹೇಳುವಿರಿ? ಅವನು ಯಾವ ಪುರುಷನಿಂದಲೂ ಮರಣವಿಲ್ಲದಂತೆ ವರ ಕೇಳಿದ, ನಾನು ಕೊಡಲೇ ಬೇಕಾಯಿತು. ಅದು ಅವನ ತಾತನಿಂದ ಅವನು ಪಡೆದ ವರವೇ! ಇನ್ನು ಅವನನ್ನು ಕೊಲ್ಲುವುದಾದರೆ ಯಾವಳಾದರೂ ಸ್ತ್ರೀಯೇ ಕೊಲ್ಲಬೇಕು. ಅಂಥವಳು ಯಾರೆಂದು ಮೊದಲು ಶಿವನನ್ನು ಕೇಳೋಣ. ಆತನ ಪತ್ನಿ ಪಾರ್ವತಿ ಮಹಾದೇವಿಯ ಅಂಶದವಳು ತಾನೇ?" ಎಂದನು ಬ್ರಹ್ಮ.

ದೇವತೆಗಳೆಲ್ಲಾ ಬ್ರಹ್ಮನೊಂದಿಗೆ ಶಿವನ ಬಳಿಗೆ ಹೋದರು. "ಏನು ಕೆಲಸದ ಮೇಲೆ ಬಂದಿರಿ?" ಎಂದು ಶಿವನು ಅವರನ್ನು ಕೇಳಿದನು.

"ನಿನಗೆ ತಿಳಿಯದುದೇನಿದೆ? ಮಹಿಷಾಸುರನು ಸ್ವರ್ಗವನ್ನು ಆಕ್ರಮಿಸಿ ಇಂದ್ರನನ್ನೂ, ಇತರ ದೇವತೆಗಳನ್ನೂ ಗುಡ್ಡಗಾಡುಗಳ ಗತಿಗೆ ಅಟ್ಟಿದ್ದಾನೆ. ದೇವತೆಗಳಿಲ್ಲದೆ, ಯಜ್ಞಯಾಗಗಳು ನಿಂತು ಲೋಕಕಾರ್ಯವೆಲ್ಲ ಅಸ್ತವ್ಯಸ್ತವಾಗಿವೆ. ಹೀಗೆಯೇ ಮುಂದುವರಿದರೆ ನಮ್ಮ ಪ್ರಪಂಚದ ಗತಿ ಏನಾದೀತು?" ಎಂದನು ಬ್ರಹ್ಮ.

ಶಿವನು ಮುಗುಳು ನಗೆ ನಕ್ಕು, "ಅದು ತಾನೇ ನಾವೆಲ್ಲಾ ಸೇರಿ ಒಮ್ಮೆ ಮಂಗಳಾರತಿ ಮಾಡಿಸಿಕೊಂಡೆವಲ್ಲಾ! ಈ ಅನರ್ಥಗಳಿಗೆಲ್ಲಾ ಮೂಲಕಾರಣ

ನೀನು ತಾನೇ ಬ್ರಹ್ಮಾ? ನಿನ್ನ ವರದಿಂದ ಅವನನ್ನು ಯಾವ ಗಂಡೂ ಕೊಲ್ಲಲಾರನು. ನಿನ್ನ ಹೆಂಡತಿಯನ್ನು ಕಳುಹಿಸುವಿಯಾ? ನನ್ನ ಹೆಂಡತಿಯನ್ನು ಕಳುಹಿಸಲೇ? ಅಥವಾ ಇಂದ್ರನ ಹೆಂಡತಿ ಯುದ್ಧಕ್ಕೆ ಹೋಗುವಳೇ? ನಮ್ಮ ಹೆಂಡತಿಯರಲ್ಲಿ ಯಾರಿಗೂ ಯುದ್ಧಮಾಡುವ ಸಾಮರ್ಥ್ಯವಿಲ್ಲವಲ್ಲಾ? ಆದುದರಿಂದ ಆ ರಾಕ್ಷಸನೊಂದಿಗೆ ಹೋರಾಡಲು ಯಾವ ಸ್ತ್ರೀಶಕ್ತಿಯನ್ನು ಕಳುಹಿಸುವುದೆಂದು ವಿಷ್ಣುವನ್ನೂ ಒಂದು ಮಾತು ಕೇಳಿ ನೋಡವಾ." ಎಂದನು.

ಎಲ್ಲರೂ ಕೂಡಿ ವಿಷ್ಣುವಿನ ಬಳಿಗೆ ಹೋದರು. ಅವರು ಬಂದ ವಿಷಯವನ್ನು ಕೇಳಿ ವಿಷ್ಣು. "ನಾವೆಲ್ಲಾ ಮಹಿಷನೊಂದಿಗೆ ಯುದ್ಧಮಾಡಿ ಸೋತುಹೋದವರೇ. ಹೆಣ್ಣಿನಿಂದಲೇ ಅವನ ಸಾವೆಂಬುದು ಗೊತ್ತಿದ್ದೂ ನಮ್ಮ ಮರ್ಯಾದೆ ಉಳಿಸಿಕೊಳ್ಳಲಿಕ್ಕಾಗಿ ಹೋರಾಡಿದ್ದೂ ಆಯಿತು. ನಮ್ಮ ಹೆಂಡತಿಯರನ್ನು ಮುಂದಿಟ್ಟು ಯುದ್ಧ ಮಾಡಿದರೂ ಲೋಕಮರ್ಯಾದೆಗೆ ಕೇಡು. ನಮಗಿಂತ ಮೇಲಾದವರೆನಿಸಲು ನಮ್ಮ ಹೆಂಡತಿಯರೂ ಒಪ್ಪುವುದಿಲ್ಲ. ಆದುದರಿಂದ ನಾವು ಮಹಾದೇವಿಯನ್ನು ಧ್ಯಾನಿಸಿ. ನಮ್ಮ ತೇಜಸ್ಸುಗಳನ್ನು ಹೊರಡಿಸಿ. ಹೊಸ ಸ್ತ್ರೀಯನ್ನೇ ಸೃಷ್ಟಿಸೋಣ. ಅವಳಿಗೇ ನಮ್ಮ ಆಯುಧಗಳನ್ನೆಲ್ಲ ಕೊಡೋಣ. ಮಹಿಷಾಸುರನೊಂದಿಗೆ ಯುದ್ಧ ಮಾಡುವಂತೆ ಅವಳನ್ನೇ ಪ್ರಾರ್ಥಿಸೋಣ" ಎಂದನು.

ದೇವತೆಗಳೆಲ್ಲರೂ ಮಹಾದೇವಿಯನ್ನು ಧ್ಯಾನಿಸುತ್ತ. ತಮ್ಮ ತೇಜಸ್ಸುಗಳನ್ನು ಹೊರಡಿಸಿದರು. ಅದು ಕ್ರಮವಾಗಿ ಒಂದಾಗಿ ಹದಿನೆಂಟು ಕೈಗಳಿರುವ ಸ್ತ್ರೀ ಮೂರ್ತಿಯಾಗಿ. ಅವಳು ಅದ್ಭುತ ತೇಜಸ್ಸಿನಿಂದ ಕಂಗೊಳಿಸಿದಳು. ದೇವತೆಗಳು ಅವಳ ಕೈಗಳಲ್ಲಿ ತಮ್ಮ ತಮ್ಮ ಆಯುಧಗಳನ್ನು ಕೊಟ್ಟರು.

ಅವಳು ದೇವತೆಗಳ ಪ್ರಾರ್ಥನೆಯನ್ನು ಲಾಲಿಸಿ. "ಹೆದರಬೇಡಿ! ಆ ರಾಕ್ಷಸನನ್ನು ನಾನು ಕೊಲ್ಲುತ್ತೇನೆ" ಎಂದು ಹೇಳಿ. "ಎಲೋ ಮಹಿಷಾಸುರಾ!" ಎಂದು ದಿಕ್ಕುಗಳು ಒಡೆದುಹೋಗುವ ಹಾಗೆ



ಸಿಂಹನಾದ ಮಾಡಿದಳು. ಆ ಶಬ್ದವು ಮಹಿಷಾಸುರನ ಕಿವಿಗೆ ಹೊಕ್ಕಿತು. "ಯಾರಿದು ಹೀಗೆ ಕೂಗಿದ್ದು? ಹೋಗಿ ಆ ಮದಾಂಧನನ್ನು ಇಲ್ಲಿಗೆ ಎಳೆದು ತನ್ನಿರಿ! ನನ್ನ ಕೈಯಿಂದ ಸಾಯುವ ಹಾಗೆ ಪೆಟ್ಟುತಿಂದ ದೇವತೆಗಳಿಗೆ ಹೀಗೆ ಕೂಗುವ ಧೈರ್ಯ ಬಾರದು! ನೋಡಿ ಬನ್ನಿ" ಎಂದನು ತನ್ನ ಸೇವಕರೊಂದಿಗೆ.

ಆ ರಾಕ್ಷಸ ಸೇವಕರು ಓಡೋಡಿ ಹೋಗಿ, ಮಹಾದೇವಿಯ ವೀರವೂ, ಘೋರವೂ, ಭವ್ಯವೂ ಆದ ಅವತಾರವನ್ನು ನೋಡಿ ಹೆದರಿ ಓಡುತ್ತಾ ಹಿಂದಿರುಗಿ, "ಯಾವಳೋ ಸಿಂಹದ ಮೇಲೇರಿಕೊಂಡು ಇಲ್ಲಿಗೇ ಬಂದಿದ್ದಾಳೆ. ಶರೀರ ತುಂಬಾ ಆಭರಣಗಳಿದ್ದರೂ ಹದಿನೆಂಟು ಕೈಗಳಲ್ಲಿಯೂ ಮಾರಣಾಯುಧಗಳನ್ನೂ ಹಿಡಿದಿದ್ದಾಳೆ. ಬಹಳ ಭಯವಾಗಿದೆ ಪ್ರಭುವೇ!" ಎಂದರು.

ಮಹಿಷನು ತನ್ನ ಮಂತ್ರಿಯೊಂದಿಗೆ, "ನೀನು ಹೋಗಿ ನೋಡು. ಅವಳನ್ನು ಒಳ್ಳೆಯ ಮಾತಿನಲ್ಲಿ ಮಂಕುಮಾಡಿ ಕರೆದುಕೊಂಡು ಬಾ. ನನಗೆ ತಕ್ಕ ಪಟ್ಟಮಹಿಷಿ ಅವಳಾಗಬಹುದೇನೋ?" ಎಂದನು.

ಮಂತ್ರಿ ಬಂದು ದೂರದಲ್ಲಿ ನಿಂತು ಆ ದೇವಿಯೊಂದಿಗೆ, "ಯಾರಮ್ಮಾ ನೀನು? ಮಹಿಷಾಸುರನನ್ನು ನೋಡಬೇಕೆ? ಆ ಸರ್ವ ಲೋಕಪಾಲಕ ಮಹಿಷಾಸುರ ರಾಜನು ನಿನ್ನ ಪಾಣಿಗ್ರಹಣಕ್ಕೆ ತಕ್ಕವನು. ಬಾ!" ಎಂದನು.

ದೇವಿ ಕಿರುನಗೆ ನಕ್ಕು, "ಅವನನ್ನು, ಇದ್ದುದರಲ್ಲಿ ತೃಪ್ತಿ ಕಾಣದೆ ದುರಾಕ್ರಮಣ ಮಾಡಿದವನನ್ನು ಕೊಲ್ಲಲಿಕ್ಕೇ ಬಂದವಳು ನಾನು. ಅವನಿಗೆ ತಕ್ಕ ಪತ್ನಿ ಮೃತ್ಯು. ಅಲ್ಪನಾದ ನಿನ್ನನ್ನು ಕೊಲ್ಲಲಾರೆ. ನಿನ್ನ ಯಜಮಾನ ಸಾಯಲು ಬರಲಿ" ಎಂದಳು.

ಮಹಿಷಾಸುರನು ತನ್ನ ಮಂತ್ರಿಯ ಮಾತುಗಳನ್ನು ನಂಬದೆ. ತನ್ನ ರಾಯಭಾರಿಯಾಗಿ ಸೇನಾಪತಿಯಾದ ತಾಮ್ರನನ್ನು ಮಹಾದೇವಿಯ ಬಳಿಗೆ ಕಳುಹಿಸಿದನು. ಅವನು ಅವಳಿಗೆ ಮರ್ಯಾದೆ ಕಲಿಸಲು ಮಾತೆತ್ತಿದ ಕೂಡಲೇ ದೇವಿ ಅವನನ್ನು ಕೊಂದಳು. ಮಹಿಷನ ಪ್ರೇಮಘಟ್ಟವು ಅಲ್ಲಿಗೆ ಮುಗಿದು. ರೋಷಘಟ್ಟವು ಪ್ರಾರಂಭವಾಗಿ ತನ್ನ ಸೇನಾಪತಿಗಳನ್ನು ದೇವಿಯ ಮೇಲೆ ಯುದ್ಧಕ್ಕೆ ಕಳುಹಿಸಿದನು. ಎಲ್ಲರೂ ದೇವಿಯ ಕೈಯಲ್ಲಿ ಸತ್ತರು. ತರುವಾಯ ಮಹಿಷಾಸುರನೇ ಯುದ್ಧಕ್ಕೆ ಬಂದನು. ಕಾಮರೂಪಿಯಾದ ಮಹಿಷನು ಅನೇಕ ರೂಪಗಳನ್ನು ಧರಿಸಿ ದಾರುಣವಾಗಿ ಯುದ್ಧಮಾಡಿದನು. ಕಡೆಗೆ ದೇವಿ ಚಕ್ರಾಯುಧದಿಂದ ಅವನ ತಲೆಯನ್ನು ಕಡಿದಳು. ದೇವತೆಗಳು ಪರಮ ಸಂತೋಷದಿಂದ ಸಿಂಹವಾಹಿನಿಯಾದ ಆ ದೇವಿಯನ್ನು ಸ್ತೋತ್ರಮಾಡಿದರು.





# ಪಕ್ಕೋಶೂಲೆ

ಒಂದು ಊರಿನಲ್ಲಿ ಮಾಲತಿ ಮತ್ತು ನಂದನಾ ಎಂಬ ಹುಡುಗಿಯರು ಚಿಕ್ಕಂದಿನಿಂದಲೂ ಸ್ನೇಹಿತೆಯರಾಗಿದ್ದರು. ನಂದನಾಳ ತಂದೆ ನಗರಕ್ಕೆ ಹೋಗಿ ವ್ಯಾಪಾರವನ್ನು ಪ್ರಾರಂಭಿಸಿದುದರಿಂದ. ಅವನೊಂದಿಗೆ ಅವನ ಕುಟುಂಬವೂ ಹೊರಟು ಹೋಯಿತು. ಸ್ನೇಹಿತೆಯರಿಬ್ಬರೂ ಒಬ್ಬರನ್ನೊಬ್ಬರು ಅಗಲುವಾಗ. ನಂದನಾಳು ಒಂದುಸಾರಿ ನಗರದ ತಮ್ಮ ಮನೆಗೆ ಬರಲೇಬೇಕೆಂದು ಮಾಲತಿಗೆ ಒತ್ತಾಯಮಾಡಿ ಹೇಳಿದ್ದಳು. ತಮ್ಮ ಹೆಸರು ವಿಳಾಸಗಳನ್ನು ಕೂಡಾ ಬರೆದುಕೊಟ್ಟಿದ್ದಳು.

ಆದರೆ ಮಾಲತಿಗೆ ನಗರಕ್ಕೆ ಹೋಗುವ ಸಂದರ್ಭವು ಅನೇಕ ತಿಂಗಳವರೆಗೆ ಬರಲಿಲ್ಲ. ಕಡೆಗೊಂದುದಿನ ಮಾಲತಿಗೆ ಒಂದು ಅನುಕೂಲ ಬಂದೇ ಬಂದಿತು. ಮಾಲತಿಯ ಮನೆಯವರಿಗೆ ಸ್ನೇಹಿತನಾದ ವರ್ತಕನೊಬ್ಬನು ಅವನ ಕೆಲಸದ ಮೇಲೆ ನಗರಕ್ಕೆ ಹೊರಡಲಿದ್ದನು. ಮಾಲತಿಯನ್ನು ನಂದನಾಳ ಮನೆಯ ಹತ್ತಿರ ಬಿಟ್ಟುಬಿಡಲು ಅವನು ಒಪ್ಪಿಕೊಂಡನು. ಅವನ ಗಾಡಿಯಲ್ಲೇ ಮಾಲತಿ ನಗರಕ್ಕೆ ಹೋದಳು. ನಂದನಾಳ ಬೀದಿ ಕವಲೊಡೆಯುವಲ್ಲಿ ನಂದನಾ ಇಳಿದು. ತಾನೊಬ್ಬಳೇ ಹೋಗಬಲ್ಲೆನೆಂದು ಹೇಳಿ ವರ್ತಕನನ್ನು ಕಳುಹಿಸಿಕೊಟ್ಟಳು. ಮಾಲತಿ ನಂದನಾಳ ಮನೆಯ ಮುಂದೆ ಹೋದಾಗ ಆ ಮನೆಗೆ ಬೀಗ ಹಾಕಲಾಗಿತ್ತು. ಮಾಲತಿಗೆ ಏನು ಮಾಡಬೇಕೆಂದು ಗೊತ್ತಾಗಲಿಲ್ಲ. ಕಡೆಗೆ ಪಕ್ಕದ ಮನೆಗೆ ಹೋಗಿ ಕಿಟಿಕಿಯಿಂದ ಒಳಗೆ ನೋಡಿದಳು. ಆ ಮನೆಯೊಳಗಿದ್ದ ನಡುವಯಸ್ಸಿನ ಹೆಂಗುಸು ಮಾಲತಿಯನ್ನು ನೋಡಿ, " ಯಾರಮ್ಮಾ ? ಏನು ಬೇಕು ? " ಎಂದು ಕೇಳಿದಳು.

ಮಾಲತಿ ಅವಳೊಂದಿಗೆ ತನ್ನ ಸಂಗತಿಯನ್ನು ಹೇಳಿ. " ನಂದನಾ ಎಲ್ಲಿಗೆ ಹೋದಳೋ ? ಯಾವಾಗ ಬರುವಳೋ ? ನಿಮಗೇನಾದರೂ ಗೊತ್ತಿದೆಯೇ ? " ಎಂದು ಕೇಳಿದಳು.

" ಯಾರೋ ಬಂಧುಗಳ ಮನೆಯಲ್ಲಿ ಮದು ಅಂತ ಎಲ್ಲರೂ ಪಕ್ಕದ ಊರಿಗೆ ಹೋಗಿದ್ದಾರೆ. ಹಿಂದಿರುಗುವಾಗ ಹೊತ್ತು ಮುಳುಗಿ ಕತ್ತಲೆಯಾದೀತು. ಅಷ್ಟರವರೆಗೆ ನಮ್ಮ ಮನೆಯಲ್ಲೇ ಇರಬಹುದಮ್ಮ. ಚಿಂತಿಸಬೇಡ. ಈ ನಗರದಲ್ಲಿ ಒಬ್ಬಳೇ ಅಲ್ಲಿ ಇಲ್ಲಿ ತಿರುಗುವುದು ಒಳ್ಳೇದಲ್ಲ " ಎಂದು ಹೇಳಿ ಆ ಹೆಂಗಸು ಬಾಗಿಲು ತೆರೆದಳು.

ಎಂ. ಕೆ. ಈಶ್ವರರಾವ್



ಮಾಲತಿಗೆ ಧೈರ್ಯ ಬಂದಿತು. ಮುಂದಾಗಿ ತಿಳಿಸದೆ ಯಾರ ಮನೆಗೂ ಹೋಗಬಾರದು ಎಂದು ತನ್ನ ತಂದೆ ಏಕೆ ಹೇಳುತ್ತಾರೆಂಬುದು ಈಗ ಅವಳಿಗೆ ಅರ್ಥವಾಯಿತು.

ಆ ಮನೆಯ ಹೆಂಗುಸು ಒಳ್ಳೆಯವಳಾದುದರಿಂದ ಸರಿಹೋಯಿತು. ಅವಳ ಮಗಳೂ ಸಹಾ ಒಳ್ಳೆಯವಳೇ. ಅವಳ ಹೆಸರು ಜಾನಕಿ. ಮಾಲತಿಯಷ್ಟೇ ವಯಸ್ಸಿನವಳಾದ ಜಾನಕಿಯೊಂದಿಗೆ ಮಾಲತಿಯ ಸ್ನೇಹ ನಿಮಿಷ ನಿಮಿಷಕ್ಕೂ ಚೆನ್ನಾಗಿ ಬೆಸೆಯಿತು. ಜಾನಕಿಯ ತಂದೆಗೆ ಹೇಳಿಕೊಳ್ಳುವಂಥ ಕೆಲಸವೇನೂ ಇಲ್ಲವಂತೆ. ಅಂತೆಯೇ ಅವರಿಗೆ ದೊಡ್ಡ ಆದಾಯವೇನೂ ಇರಲಿಲ್ಲ. ಆದರೂ ಅವರು ತುಂಬ ಒಳ್ಳೆಯ ಹೃದಯವುಳ್ಳವರಾದುದರಿಂದಲೇ. ಗುರುತು ಪರಿಚಯವೇನಿಲ್ಲದ ತನ್ನನ್ನು ಆದರಿಸುತ್ತಾರೆಂದು ಮಾಲತಿ ಮೆಚ್ಚಿಕೊಂಡಳು. ಹಗಲು ಹೊತ್ತಿನಲ್ಲಿ ಜಾನಕಿ ಮಾಲತಿಯನ್ನು ಕರೆದುಕೊಂಡು ನಗರವನ್ನೆಲ್ಲಾ ಸುತ್ತಾಡಿ, ವಿಶೇಷಗಳನ್ನು ತೋರಿಸಿದಳು. ಆದಿನ ಸಾಯಂಕಾಲ ಜಾನಕಿಯ ಸ್ನೇಹಿತೆಯ ಮನೆಯಲ್ಲಿ ಮದುವೆಯ ಔತಣವಿದ್ದಿತಂತೆ. "ಹೋಗದಿದ್ದರೆ ಚೆನ್ನಾಗಿರದು. ನೀನಾದರೂ ಹೋಗಿಬಾರಮ್ಮಾ" ಎಂದು ಜಾನಕಿಗೆ ಅವಳ ತಾಯಿ ಹೇಳಿದಳು. ಆದರೆ ಜಾನಕಿ ಮುಖ ಮುದುಡಿಕೊಳ್ಳುತ್ತ, "ನಾನು ಹೋಗಲಾರೆನಮ್ಮ. ಅಲ್ಲಿಗೆ ಬರುವವರೆಲ್ಲಾ ದೊಡ್ಡ ದೊಡ್ಡವರೇ. ನನಗೆ ಉಟ್ಟುಕೊಳ್ಳಲಿಕ್ಕೆ ಒಳ್ಳೇ ಸೀರೆಯೂ ಇಲ್ಲ. ಬೋಳು ಕುತ್ತಿಗೆ, ಬೋಳು ಕೈಗಳನ್ನಿಟ್ಟುಕೊಂಡು ಅಂಥಾ ಔತಣಕ್ಕೆ ಹೋದೆನೆಂದರೆ ಉಳಿದವರ ನಡುವೆ ನಾನೊಬ್ಬಳು ಕೆಲಸದವಳ ಹಾಗೆ ಕಂಡೇನು. ನಾನು ಹೋಗಲಾರೆನಮ್ಮಾ" ಎಂದಳು ಜಾನಕಿ.

ಆ ಮಾತು ಕೇಳಿದ ಕೂಡಲೇ ಮಾಲತಿ, ಜಾನಕಿಗೆ ತನ್ನ ಪೆಟ್ಟಿಗೆಯಿಂದ ಪಟ್ಟೇ ಸೀರೆಯನ್ನು ತೆಗೆದುಕೊಟ್ಟು, ತನ್ನ ನಗಗಳನ್ನೂ ಅವಳಿಗೆ ತೊಡಿಸಿ, "ಇನ್ನೇನೂ ಮಾತಾಡದೆ ಮದುವೇ ಔತಣಕ್ಕೆ ಹೋಗಿ ಬಾ" ಎಂದಳು.

ಜಾನಕಿ ಮತ್ತೇನೂ ಅಭ್ಯಂತರ ಹೇಳದೆ ಔತಣಕ್ಕೆ ಹೊರಟುಹೋದಳು.

ಕತ್ತಲೆಯಾಯಿತು. ರಾತ್ರಿ ಮುಂದುವರಿಯುತ್ತಾ ಇದ್ದಿತು. ಮದುವೆಗಾಗಿ ಪಕ್ಕದ ಊರಿಗೆ ಹೋದ ನಂದನಾಳೂ ಬರಲಿಲ್ಲ. ಔತಣಕ್ಕೆ ಹೋದ ಜಾನಕಿಯೂ ಹಿಂದಿರುಗಿ ಬರಲಿಲ್ಲ. ತಾನು ಹೋಗಿ ಜಾನಕಿಯನ್ನು ಕರೆದುಕೊಂಡು ಬರುವೆನೆಂದು ಅವಳ ತಂದೆ ಹೊರಟನು. ಹೊರಟವನು ಮುಂಬಾಗಿಲ ಹತ್ತಿರ ಬಿದ್ದಿದ್ದ ಒಂದು ಕಾಗದವನ್ನು ಎತ್ತಿ, ದೀಪದ ಬೆಳಕಿನಲ್ಲಿ ಓದಿ, "ಅಯ್ಯೋ" ಎಂದು ಕೂಗಿ ತಲೆಹಿಡಿದು ಕುಳಿತುಬಿಟ್ಟನು !

ಮಾಲತಿ ಓಡಿಹೋಗಿ ಅವನ ಕೈಯಲ್ಲಿದ್ದ ಕಾಗದವನ್ನು ತೆಗೆದುಕೊಂಡು ಓದಿದಳು. ಅದು

ಜಾನಕಿ ತನ್ನ ತಾಯಿಗೆ ಬರೆದ ಕಾಗದ. ಅದರಲ್ಲಿ ಹೀಗಿದೆ: "ಅಮ್ಮಾ, ಹೆಣ್ಣಿಗೆ ನಗಗಳು ದೊಡ್ಡ ಶತ್ರುವೆಂದು ಈದಿನ ಗೊತ್ತಾಯಿತು. ಔತಣದಿಂದ ಬರುವಾಗ ಒಂದು ಸಂದುಜಾಗದಲ್ಲಿ ನಾಲ್ಕು ಮಂದಿ ಟೋಣಪರು ಬಂದು ನನ್ನನ್ನು ಹಿಡಿದು, ಕತ್ತಿ ತೋರಿಸಿ ಎಲ್ಲಾ ನಗಗಳನ್ನೂ ಸುಲಿದುಕೊಂಡು ಓಡಿದರು. ಇನ್ನೊಬ್ಬಳ ನಗಗಳನ್ನು ಹಾಕಿಕೊಂಡು ದಕ್ಕೆ ಅಪ್ಪ ನನ್ನ ಕುತ್ತಿಗೆ ಕಿವಿಚಿ ಹಾಕಿಯಾರು ಅಂತ ಹೆದರಿ ಎಲ್ಲಿಗೋ ಹೊರಟಿದ್ದೇನೆ. ನನ್ನನ್ನು ಹುಡುಕಬೇಡಮ್ಮಾ."

ಈ ಕಾಗದವನ್ನು ಓದಿ ಮಾಲತಿಯ ಕಣ್ಣುಗಳು ತುಂಬಿಕೊಂಡುವು. ಇಂತಹ ರಾತ್ರಿಯ ಹೊತ್ತಿನಲ್ಲಿ ಜಾನಕಿ ಎಲ್ಲಿಗೆ ತಾನೇ ಹೋದಾಳು ? ಏನಾದರೂ ಘಾತಮಾಡಿಕೊಳ್ಳಲಾರಳಷ್ಟೆ ? ನಗನಟ್ಟುಗಳಿಗಿಂತ ಪ್ರಾಣದ ಬೆಲೆ ಹೆಚ್ಚಲ್ಲವೇ ?

ಕಾಗದದ ಸಂಗತಿ ತಿಳಿದು ಜಾನಕಿಯ ತಾಯಿ ಶೋಕಿಸಲು ಪ್ರಾರಂಭಿಸಿದಳು. ಜಾನಕಿಯ ತಂದೆ ಮಾಲತಿಯೊಂದಿಗೆ. "ಅಮ್ಮಾ. ಕಾಲಕ್ರಮದಲ್ಲಿ ನಿನ್ನ ನಗಗಳ ಬೆಲೆಯನ್ನು ಕೊಟ್ಟುಬಿಡುತ್ತೇನೆ. ಜಾನಕಿಯನ್ನು ನಾನೀಗ ಎಲ್ಲಿ ಅಂತ ಹುಡುಕಲಿ ? ರಾತ್ರಿಯ ಹೊತ್ತಿನಲ್ಲಿ ಅವಳೇಕೆ ಹಾಗೆ ಹೊರಟು ಬರಬೇಕಿತ್ತು ? ನನ್ನ ಕೈಯಲ್ಲಂತೂ ಸದ್ಯ ಚಿಕ್ಕಾಸು ಕೂಡಾ ಇಲ್ಲ" ಎಂದು ಕಣ್ಣೀರು ಒರೆಸಿಕೊಂಡನು.

"ಅಯ್ಯಾ, ಹೋದ ನಗಗಳ ಹಣ ನೀವು ಕೊಡಬೇಕಾಗಿಲ್ಲ, ಆ ಚಿಂತೆ ಬಿಡಿ. ಮೊದಲು ಜಾನಕಿಯನ್ನು ಹುಡುಕಲು ಯಾರನ್ನಾದರೂ ಕಳುಹಿಸಿರಿ. ರಾತ್ರಿಯಲ್ಲಿ ನೀವು ನನಗೆ ಆಶ್ರಯ ಕೊಡದೇ ಹೋಗಿದ್ದರೆ ಕಳ್ಳರು ನನ್ನ ಶರೀರದಿಂದಲೇ ನಗಗಳನ್ನು ಸುಲಿದುಕೊಳ್ಳುತ್ತಿದ್ದರೇನೋ !" ಎಂದಳು ಮಾಲತಿ. ಜಾನಕಿಯ ತಂದೆ ಜಾನಕಿಯನ್ನು ಹುಡುಕಲು ಕತ್ತಲೆಯಲ್ಲಿ ಎಲ್ಲಿಗೋ ಹೊರಟನು.

ಮತ್ತೆ ಸ್ವಲ್ಪ ಹೊತ್ತಿನ ಮೇಲೆ ಪಕ್ಕದ ಮನೆಯ ಮುಂದೆ ಗಾಡಿ ಬಂದು ನಿಂತ ಶಬ್ದವಾಯಿತು. ಮಾಲತಿಯೂ, ಜಾನಕಿಯ ತಾಯಿಯೂ ಆತುರ





ದಿಂದ ಹೊರಗೆ ಬಂದು ನೋಡಿದರು. ನಂದನಾ ತನ್ನ ವರೊಂದಿಗೆ ಗಾಡಿಯಿಂದಿಳಿಯುವುದನ್ನು ಮಾಲತಿ ನೋಡಿ ಓಡಿದಳು. ಅಕಸ್ಮಾತ್ತಾಗಿ ಸ್ನೇಹಿತೆಯನ್ನು ನೋಡಿ ನಂದನಾ ಆನಂದದಿಂದ ಆಲಿಂಗನವಿತ್ತು, ವಿಚಾರಿಸಿದಳು. ಮಾಲತಿ ಜಾನಕಿಯ ಮನೆಯೊಳಗಿನಿಂದ ತನ್ನ ಪೆಟ್ಟಿಗೆ ತೆಗೆದುಕೊಂಡು ನಂದನಾಳ ಮನೆಗೆ ಬಂದಳು.

ಮಾಲತಿ ಒಳಗೆ ಬಂದ ಕೂಡಲೇ ನಂದನಾ "ಮಾಲತೀ: ಮೊದಲು ನಿನ್ನ ಪೆಟ್ಟಿಗೆಯನ್ನು ತೆರೆದು ಸಾಮಾನುಗಳು ಸರಿಯಾಗಿವೆಯೋ ಇಲ್ಲವೋ ನೋಡಿಕೊ. ನೀನು ಉಳಿದುಕೊಳ್ಳಲು ಆ ಕಳ್ಳರ ಮನೆಯೇ ಸಿಕ್ಕಿತೇನು ?" ಎಂದಳು.

ಆ ಮಾತು ಕೇಳಿ ಮಾಲತಿ ಆಶ್ಚರ್ಯಪಡುತ್ತ, ಅಲ್ಲಿ ನಡೆದ ಸಮಾಚಾರವನ್ನೆಲ್ಲಾ ಹೇಳಿ, "ನೀನೇನೋ ತಪ್ಪಾಗಿ ತಿಳಿದಿದ್ದೀ ನಂದನಾ. ಅವರೆಲ್ಲ ಬಹಳ ಒಳ್ಳೆಯವರು. ಪಾಪ. ನನ್ನ ಮೂಲಕ ಜಾನಕಿ ಎಲ್ಲಿಗೋ ಹೊರಟುಹೋದಳು !" ಎಂದಳು ಅನುತಾಪದಿಂದ.

ನಂದನಾ ಹಲ್ಲು, ಕಡಿಯುತ್ತಾ "ಎಲ್ಲಿಗೂ ಓಡಿಲ್ಲ. ಅವರ ಕಡೆಯವರ ಮನೆಯಲ್ಲಿ ಸುಖವಾಗಿ ಅಡಗಿ ಕೂತಿದ್ದಾಳೆ ಕಳ್ಳಿ !" ಇದೆಲ್ಲಾ ಅವರ ನಾಟಕ ಗೊತ್ತಾ ? ನಗರದ ಮೋಸಗಾರರನ್ನು ಕುರಿತು ನಿನಗಿನ್ನೂ ಗೊತ್ತಿಲ್ಲ. ಮೆತ್ತಗೆ ಕುತ್ತಿಗೆ ಕೊಯ್ಯುತ್ತಾರೆ. ಮುಖ್ಯವಾಗಿ ಇವರನ್ನು ಕುರಿತು ಸುತ್ತುಮುತ್ತಲೂ ಇರುವ ಎಲ್ಲರಿಗೂ ಗೊತ್ತಿದೆ. ನಾವು ಸ್ವಲ್ಪ ಕಣ್ಣು ತಪ್ಪಿದರೆ ಸಾಕು. ಬಟ್ಟೆಗಳನ್ನೂ ಪಾತ್ರೆಗಳನ್ನೂ ಕದ್ದುಕೊಂಡುಬಿಡುತ್ತಾರೆ. ಇವರ ಕಾಟ ತಾಳಲಿಕ್ಕಾಗದೆ ಪೇಚಾಡಿಕೊಂಡಿದ್ದೇವೆ. ಕಳ್ಳರು ಎಲ್ಲಾ ನಗಗಳನ್ನೂ ಸುಲಿದುಕೊಂಡರೆಂದು ಹೇಳುವ ಜಾನಕಿಗೆ ಕಾಗದ ಬರೆಯಲು ಕಾಗದವೂ ಲೇಖನಿಯೂ ಎಲ್ಲಿಂದ ಸಿಕ್ಕಿತು ಅಂತ ನೀನು ಆಲೋಚಿಸಿದೆಯಾ ? ಸುಲಭವಾಗಿ ಮೋಸಪಡಿಸಲಿಕ್ಕೆ ಇವರಿಗೆ ನೀನು ಸಿಕ್ಕಿರುವಿ !" ಎಂದಳು.

ಅದನ್ನೆಲ್ಲ ಕೇಳಿ ಮಾಲತಿಗೂ ರೋಷ ಉಂಟಾಯಿತು. "ನಾನು ಹಳ್ಳಿಯೂರಿನವಳೂ ಅಂತ ಕೇವಲವಾಗಿ ನೋಡುತ್ತೀರೇನು ? ಈ ನಗರದ ಮೋಸಗಾರರ ಆಟ ನನ್ನ ಮುಂದೆ ಸುಲಭವಾಗಿ ಸಾಗುತ್ತದೆಂದುಕೊಂಡಿರಾ ? ಇವರಿಗೆ ಬುದ್ಧಿ ಕಲಿಸದಿದ್ದರೆ ನಾನು ನಿನ್ನ ಸ್ನೇಹಿತೆಯೇ ಅಲ್ಲ. ನಿನ್ನ ಸಹಾಯ ಮಾತ್ರ ಸ್ವಲ್ಪ ಇದ್ದರೆ ಸಾಕು !" ಎಂದು ನಂದನಾಳ ಕಿವಿಯಲ್ಲಿ ಏನೋ ಹೇಳಿದಳು.

"ಪರವಾಗಿಲ್ಲವಲ್ಲ ನೀನು ! ನಿನ್ನ ಉಪಾಯ ಸರಿಯಾಗಿ ಗುರಿ ಮುಟ್ಟುವಂತೆ ಮಾಡಲು ನಮ್ಮ ಚಿಕ್ಕಮ್ಮನ ಮಗ ಸಹಕರಿಸುತ್ತಾನೆ. ಅವನು ದೊಡ್ಡ ನಾಟಕದ ರಾಯನೇ !" ಎಂದಳು ನಂದನಾ.

ಆಮೇಲೆ ಆ ದಿನವಿಡೀ ಕಳೆದು ರಾತ್ರಿ ತಲೆ ಹಾಕಿತು. ಮಾಲತಿ ಸೀರೆಯ ಸೆರಗನ್ನು ತಲೆಯ

ಮೇಲಕ್ಕೆ ಎಳೆದುಕೊಂಡು, ಜಾನಕಿಯ ಮನೆಯ ಬಾಗಿಲನ್ನು ತಟ್ಟಿ ಅರೆಗತ್ತಲೆಯಲ್ಲಿ ನಿಂತಳು. ಜಾನಕಿಯ ತಂದೆ ಬಾಗಿಲು ತೆರೆದನು.

ಮಾಲತಿ ಪಿಸುದನಿಯಿಂದ, "ಇನ್ನು ಮನೆಗೆ ಬರಬಹುದೇ ಅಂತ ಜಾನಕಿ ಕೇಳಿಬರಲು ನನ್ನ ಕಳಿಸಿದಳು." ಎಂದಳು. ಆಗ ಅವನ ಹಿಂದೆಯೇ ಬಂದಿದ್ದ ಜಾನಕಿಯ ತಾಯಿ, "ಮನೆಯೊಳಗೆ ಏನು ಹುಗಿದಿಟ್ಟಿದ್ದಾಳೆ ಅಷ್ಟು ಬೇಗ ಬರಲಿಕ್ಕೆ? ಆ ಮಾಲತಿ ಹೊರಟು ಹೋಗುವ ವರೆಗೂ ಬರಬೇಡ ಅಂತ ಹೇಳಿದ್ದೇನಲ್ಲಾ? ಯಾವಾಗ ಬರಬೇಕು ಅಂತ ನಾವೇ ಸುದ್ದಿ ಕಳುಹಿಸುತ್ತೇವೆ ಅಂತ ಹೇಳು. ಹೌದೂ, ನೀನು ಯಾರು ?" ಎಂದು ಕೇಳಿದಳು.

"ನಾನೇ ಮಾಲತಿ !" ಎಂದು ಮಾಲತಿ ಮುಸುಗು ತೆಗೆದು ಬೆಳಕಿಗೆ ಬಂದು ನಿಂತಳು. ಗಂಡಹೆಂಡಿರಿಬ್ಬರಿಗೂ ಉಸಿರಿಲ್ಲದಂತಾಯಿತು.

"ಒಳ್ಳೆಯವರ ಹಾಗೆ ಬಹಳ ಚೆಂದಾಗಿ ನಟಿಸಿದಿರಿ. ನಾನು ನನ್ನ ನಗಗಳು ಹೋದುವೆಂದು ರಕ್ಷಕಭಟರ ಹತ್ತಿರ ಹೋಗಿ ಫಿರ್ಯಾದಿ ಮಾಡಿದೆ. ಕಳ್ಳರನ್ನು ಕೂಡಾ ನಾನೇ ಹಿಡಿದು ಕೊಟ್ಟೆ" ಎಂದಳು ಮಾಲತಿ.

ಕತ್ತಲೆಯಲ್ಲಿ ಮಾಲತಿಯ ಹಿಂದೆಯೇ ರಕ್ಷಕ ಭಟನ ವೇಷದಲ್ಲಿದ್ದ ನಂದನಾಳ ಚಿಕ್ಕಮ್ಮನ ಮಗ ಮುಂದೆ ಬಂದು, "ಹುಂ. ಇನ್ನು ನಿಮ್ಮ ಆಟಕ್ಕೆ ಬೆಳಗಾಯಿತು. ನಿಮ್ಮ ಆಟ ಮುಗಿಯಿತು. ಬನ್ನಿ, ನೀವು ಮೂವರೂ ಜೈಲಿನ ಕಂಬಿಗಳನ್ನೆಣಿಸುತ್ತಾ ಕುಳಿತಿರಿ !" ಎಂದನು ಕರ್ಕಶಧ್ವನಿಯಿಂದ.

ರಕ್ಷಕಭಟನನ್ನು ನೋಡಿ ಗಂಡಹೆಂಡಿರಿಗೆ ನಡುಕವು ಬರತೊಡಗಿತು. "ನಮ್ಮನ್ನು ಕ್ಷಮಿಸಿ ಬಿಡು ಮಾಲತೀ. ಬುದ್ಧಿ ಮಣ್ಣು ತಿಂದಿತು. ಇಷ್ಟು ಕಾಲ ಮರ್ಯಾದೆಯಿಂದ ಬದುಕಿದೆವು. ಈಗ ನಮ್ಮನ್ನು ಊರವರ ಮುಂದೆ ಅವಮಾನ ಪಡಿಸಬೇಡ. ನಿನ್ನ ನಗಗಳನ್ನೂ ಸೀರೆಯನ್ನೂ ಕೊಡುತ್ತೇವೆ" ಎಂದರು.

ತನ್ನ ನಗಗಳನ್ನು ಮಾತ್ರವಲ್ಲದೆ ಸುತ್ತುಮುತ್ತಲಿನ ಮನೆಗಳಲ್ಲಿ ಕದ್ದ ವಸ್ತುಗಳನ್ನು ಕೂಡಾ ಹೊರಗೆ ತಂದರೆ ಹೊರತು ಕ್ಷಮಿಸಲಾರೆನೆಂದಳು ಮಾಲತಿ.

ಅವರು ಆ ಕೂಡಲೇ ಜಾನಕಿಯನ್ನು ಬರಮಾಡಿ, ಮಾಲತಿಯ ವಸ್ತುಗಳನ್ನೂ, ಇತರ ಕಳ್ಳತನದ ವಸ್ತುಗಳನ್ನೂ ಮಾಲತಿಗೇ ಕೊಟ್ಟು, ಬೆಳಗಾಗುವುದರೊಳಗೆ ಮನೆ ಖಾಲೀ ಮಾಡಿ ಹೊರಟುಹೋದರು.

"ನಮಗೆ ಪಕ್ಕೇಶೂಲೆಯಾಗಿದ್ದ ನೆರೆಮನೆಯ ಕಾಟವನ್ನು ತಪ್ಪಿಸಿದ ನಿನಗೆ ದೊಡ್ಡ ಔತಣ ಮಾಡುತ್ತೇನೆ ನೋಡು ಮಾಲತೀ !" ಎಂದಳು ನಂದನಾ ಮಾಲತಿಯ ಬೆನ್ನು ತಟ್ಟುತ್ತ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೦ ಫಿಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**



D. N. Shirke



Srivatsa S. Vati

* ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
* ಡಿಸೆಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
* ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
* ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

### ಅಕ್ಟೋಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: ಇವನೇನಾ ನುಂಗೋ ಗುಮ್ಮ!?

ಎರಡನೇ ಫೋಟೋ : ಕರೆಯದಿರೇ ಅಮ್ಮಾ!

ಕಳುಹಿಸಿದವರು : ಎಂ. ತಿಪ್ಪೇರುದ್ರಪ್ಪ,

ಫ್ರಿನ್ಸ್‌ಪಾಲ್ ಫಸ್ಟ್ ಮುನ್ಸೀಫ್. ಮೈಸೂರು–೭

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor : NAGI REDDI.



# ಚಂದಮಾಮ

## ಓದುಗರಲ್ಲಿ ವಿಜ್ಞಾಪನೆ

ಪತ್ರಿಕೆಯ ನಿರ್ವಹಣೆಯಲ್ಲಿ ಪ್ರತಿಯೊಂದು ಖರ್ಚೂ ಅಪಾರವಾಗಿ ಹೆಚ್ಚಾಯಿತು. ಮುಖ್ಯವಾಗಿ ಕಾಗದದ ಬೆಲೆ ಎರಡು ಪಾಲಿಗಿಂತ ಮೀರಿಹೋಗಿದೆ. ಈ ಕಾರಣದಿಂದಾಗಿ ಅನೇಕ ಪತ್ರಿಕೆಗಳ ಬೆಲೆಯನ್ನು ಹೆಚ್ಚಿಸಲ್ಪಟ್ಟಿವೆ; ಮುದ್ರಣ ಅಲಂಕರಣ ಮೊದಲಾದುವನ್ನು ಮಿತಪಡಿಸಿಕೊಂಡಿವೆ. ಆದರೆ ಚಂಧಮಾಮದಲ್ಲಿ ಅಂತಹ ಮಿತತನವನ್ನು, ಪುಟಗಳ ಬಣ್ಣಗಳ ತಗ್ಗುವಿಕೆ ಬರಬಾರದೆಂಬುದನ್ನು ಖಚಿತಪಡಿಸಿಕೊಂಡು, ಪತ್ರಿಕೆಯ ಬೆಲೆಯಲ್ಲಿ **25** ಪೈಸೆಗಳನ್ನು ಮಾತ್ರ ಹೆಚ್ಚಿಸಿ, ಬಿಡಿಪ್ರತಿಯ ಬೆಲೆ **1980** ಜನವರಿಯಿಂದ ರೂ. **1–50** ಮಾಡುತ್ತೇವೆ. ಎಷ್ಟೋ ಕಾಲದಿಂದ ಚಂದಮಾಮವು ಇದಿರಿಸಿದ ತೊಂದರೆಗಳನ್ನು ತಮ್ಮದೆಂದು ಭಾವಿಸಿ, ಪತ್ರಿಕೆಯನ್ನು ಆದರಿಸಿದ, ಪ್ರೋತ್ಸಾಹಿಸಿದ ವಾಚಕ ಮಹಾಶಯರು, ಈ ಬದಲಾವಣೆಯನ್ನು ಸಂತೋಷದಿಂದ ಸ್ವೀಕರಿಸುವರೆಂದು ಆಶಿಸುತ್ತೇವೆ. ನಮ್ಮ ಏಜೆಂಟರು ಕೂಡಾ ಈ ಬದಲಾವಣೆಯನ್ನು ಗಮನಿಸಬೇಕೆಂದು ಪ್ರಾರ್ಥನೆ.

—ಪ್ರಕಾಶಕರು



# ಕರಡಿಕೆಂಗಣ್ಣ

## ೧೭

[ಮಾಯಾಮರ್ಕಟನು ಕರಡಿಕೆಂಗಣ್ಣನ ಮಂತ್ರದಂಡದೊಂದಿಗೆ ಕಾಳೀವರ್ಮ ಮೊದಲಾದವರನ್ನು ತಪ್ಪಿಸಿಕೊಂಡು ನಗರಕ್ಕೆ ಹೋದನು. ಅಲ್ಲಿ ರಾಜಭವನದ ಹತ್ತಿರ ಆಟ ತೋರಿಸುತ್ತಿದ್ದ ಆಟವಿಕನ ಕರಡಿ, ಮರ್ಕಟನ ಮೇಲೆ ಧುಮುಕಿತು. ಆಗ ಅಲ್ಲಿಗೆ ಬಂದ ಕಾವಲಗಾರರ ನಾಯಕನು, ಕರಡಿಯಿಂದ ಮರ್ಕಟನನ್ನು ಹೊರಿಸಿಕೊಂಡು ರಾಜನ ಬಳಿಗೆ ಹೊರಟನು. ಈ ಗಡಿಬಿಡಿಯಲ್ಲಿ ಮರ್ಕಟನ ಕೈಯಲ್ಲಿದ್ದ ಮಂತ್ರದಂಡ ಎಲ್ಲೋ ಬಿದ್ದಿತ್ತು.]

**ರಾ**ಜಭವನದ ಮುಖದ್ವಾರದ ಮೆಟ್ಟಲಿನ ಹತ್ತಿರ ಹೋದ ಕೂಡಲೇ ಕಾವಲುಗಾರರ ನಾಯಕನು ಕತ್ತಿಯನ್ನು ಮೇಲೆತ್ತಿ, ಹಿಂದೆ ಬರುತ್ತಿರುವವರನ್ನು ನಿಲ್ಲುವಂತೆ ಆಡಿಸಿದನು. ಹಾಗೆಯೇ ಪ್ರಾಣಿಗಳ ಆಟಗಾರನನ್ನು ನೋಡಿ, "ಎಲೋ, ಮಹಾರಾಜರು ಈಗ ಸಭಾಭವನದಲ್ಲಿ ಒಡ್ಡೋಲಗ ನಡೆಸುವಂತೆ ಕಾಣುತ್ತದೆ. ಅಲ್ಲಿಗೆ ಈ ಕೊಳಕು ಕಾಡು ಕರಡಿ ಬರುವುದು ಮರ್ಯಾದೆ ಅಲ್ಲ. ಮಹಾರಾಜರಿಗೆ ಕೋಪ ಬಂದೀತು. ಆದ್ದರಿಂದ ಅದು ಹೊತ್ತು ಕೊಂಡಿರುವ ಕಳ್ಳ ಕೋತೀಭಂಡನನ್ನು ನೀನೇ ಹೆಗಲಿಗೇರಿಸಿಕೊಂಡು ನನ್ನ ಹಿಂದೆ ಮಹಾರಾಜರ ಬಳಿಗೆ ಬರಬಲ್ಲೆಯಾ?" ಎಂದು ಕೇಳಿದನು.

ಆ ಮಾತು ಕೇಳಿ ಆಟಗಾರನ ಮುಖವು ಕೋಪದಿಂದ ಗಂಟಿಕ್ಕಿಕೊಂಡಿತು. "ನೀವು ನನ್ನನ್ನು ಏನು ಬೇಕಾದರೂ ಹೇಳಿರಿ, ಕೇಳುತ್ತೇನೆ. ಬುದ್ಧಿಯುಳ್ಳ ಈ ನನ್ನ ಸಾಕು ಕರಡಿಯನ್ನು ಮಾತ್ರ ಕಾಡಿನ ಕೊಳಕಾ ಅಂತ ಹೇಳಿ ಅವಮಾನ ಪಡಿಸಿದರೆ ನನಗೆ ಸಹಿಸಲಾಗುವುದಿಲ್ಲ. ಇದರ ಬುದ್ಧಿವಂತಿಕೆಯ ಕೆಲಸ ನೋಡಿ ಎಷ್ಟೋ ರಾಜರೂ, ಸಾಮಂತರೂ, ಪಂಡಿತರೂ ಆಶ್ಚರ್ಯಪಟ್ಟು ಮೆಚ್ಚಿದ್ದಾರೆ ಗೊತ್ತಾ? ಲಂಕೆಗೆ



ಸೇತುವೆ ಕಟ್ಟಿದವರಲ್ಲಿ ಇದರ ಪೂರ್ವಿಕನೊಬ್ಬ ಇದ್ದ ನೆಂಬುದಕ್ಕೆ, ನನ್ನ ಹತ್ತಿರವಿರುವ ತಾಳಪತ್ರಗಳಲ್ಲಿ ರುಜುವಿದೆ. ಅದು ನನ್ನ ಚೀಲದಲ್ಲೇ ಇದೆ. ಬೇಕಾದರೆ ಹೇಳಿ, ಈಗಲೇ ತೋರಿಸುತ್ತೇನೆ" ಎಂದು ಅವನು ತನ್ನ ದುಸ್ತಿನೊಳಗಿನಿಂದ ಒಂದು ತಾಳಪತ್ರ ಗ್ರಂಥ ವನ್ನು ಹೊರಗೆ ತೆಗೆದನು. ಕಾವಲುಗಾರರ ನಾಯಕನು, ದೊಡ್ಡದನಿಯಿಂದ ನಕ್ಕು. "ಇರಲಿರಲಿ, ಅದನ್ನು ದುಸ್ತಿನೊಳಗೇ ಇಟ್ಟುಕೋ. ನಿನ್ನ ಕರಡಿಯ ವಂಶ ವೃಕ್ಷದ ಸಂಗತಿಯನ್ನು ಸಂದರ್ಭ ಬಂದಾಗ ಆಸ್ಥಾನ ಪುರೋಹಿತರಿಗೆ ತೋರಿಸಿ ಮಹಾರಾಜರಿಂದ ಏನಾದರೂ ಒಳ್ಳೆಯ ಬಹುಮಾನ ಪಡೆಯಬಹುದು. ಮೊದಲು ಆ ಕೋತೀವೇಷದ ಶತ್ರು ಗೂಢಚಾರಿ ಯನ್ನು ಕರಡಿಯ ಹೆಗಲಿನಿಂದ ಕೆಳಗಿಳಿಸಿ ನೀನು ಹೊತ್ತುಕೋ. ತಡಮಾಡಿದರಾಗಲಿಲ್ಲ." ಎಂದನು.

ಆಟಗಾರನು ಇಷ್ಟವಿಲ್ಲದವನಂತೆ ಮುಖಮಾಡಿ ಕೊಂಡು, ಕರಡಿಯ ಬಳಿಗೆ ಬಂದು ಅದರ ಬೆನ್ನು ತಡವುತ್ತ, "ವೀರ ಬಂಟಾ, ನೀನು ಹೊತ್ತವನನ್ನು ಕೆಳಗೆ ಇಳಿಸಪ್ಪ. ಹೋಗಲಿ ಬಿಡು" ಎಂದು ಹೇಳಿ ಮಾಯಾಮರ್ಕಟನ ನಡುವಿಗೆ ಕಟ್ಟಿರುವ ಹಗ್ಗವನ್ನು ಗಟ್ಟಿಯಾಗಿ ಹಿಡಿದುಕೊಂಡನು.

ಕರಡಿ ಕೋರೆ ಹಲ್ಲುಗಳನ್ನು ತೋರಿಸಿ ದೊಡ್ಡ ದೊಂದು ಗರ್ಜನೆ ಹೊರಡಿಸಿ, ಮಾಯಾಮರ್ಕಟ ನನ್ನು ಇಳಿಸಲು ಬಾಗಿತು. ಅಷ್ಟರಲ್ಲೇ ಮರ್ಕಟ ದವನು ಕಿರ್ರನೆ ಕಿರುಚಿ ಕೆಳಗೆ ಹಾರಿ ದೊಡ್ಡ ಕಂಠದಿಂದ, "ಎಲೆಲೋ ಬುದ್ಧಿಗೇಡಿಗಳೇ! ನಿಮ್ಮ ನಗರಕ್ಕೆ ಕರಡಿಕೆಂಗಣ್ಣ ಮಾಂತ್ರಿಕನಿಂದ ಆಪತ್ತು ಬರುತ್ತಾ ಇದೆ. ನಿಮ್ಮ ರಾಜನು ಎಲ್ಲಿದ್ದಾನೆ? ಬೇಗ ತೋರಿಸಿರಿ! ನನ್ನ ಮಂತ್ರದಂಡ ಎಲ್ಲಿ? ಕೊಡಿರಿ ಹೀಗೆ!" ಎಂದು ಕೂಗಿ ಹೇಳಿದನು ಅತ್ತಿತ್ತ ನೋಡುತ್ತ.

ಆ ಮಾತು ಕೇಳಿ ಅಲ್ಲಿದ್ದ ಜನರೆಲ್ಲ ಹೋ ಹೋ ಎಂದು ಕೂಗುತ್ತ ಚಪ್ಪಾಳೆ ತಟ್ಟಿದರು. ಅವರ ಲ್ಲೊಬ್ಬನು ಉದ್ದವಾಗಿದ್ದ ತನ್ನ ಕೈಕೋಲನ್ನು ಮರ್ಕಟನ ಕಡೆಗೆ ಚಾಚಿ, "ಇಕೋ ನಿನ್ನ ಮಂತ್ರ ದಂಡ! ಏನೇನು ಅದ್ಭುತ ಕಾರ್ಯಮಾಡುವೆಯೋ ಮಾಡಿ ತೋರಿಸು!" ಎಂದನು.

ಮಾಯಾಮರ್ಕಟನು ಆ ಕೋಲನ್ನು ಎಳೆದು ಕೊಂಡು ಅದನ್ನು ನೆಟ್ಟಗೆ ನೆಲದ ಮೇಲಿಟ್ಟು, ಥಣ್ಣನೆ ಅದರ ಕೊನೆಯ ಮೇಲೆ ಹಾರಿ ಒಂಟಿಗಾಲಿ ನಲ್ಲಿ ನಿಂತು, "ಎಲೋ ಬುದ್ಧಿಗೆಟ್ಟವರೇ! ಇಂತಹ ಆಟ ನೀವೆಂದಾದರೂ ನೋಡಿದ್ದೀರಾ? ಹೀಗೆ ಆಟ ನೋಡುತ್ತಾ ಪೇಚಾಟಕ್ಕೆ ಬೀಳುವುದೇ ನಿಮ್ಮ ಹಣೆ ಬರಹವಾದರೆ ನೋಡುತ್ತಾ ಸಾಯಿರಿ. ನಿಮ್ಮ ರಾಜನಿಗೂ ರಾಜ್ಯಕ್ಕೂ ಆಪತ್ತು ಸಮಾಪಿಸಿ ಕೊಂಡಿರುವ ಈ ಸಮಯದಲ್ಲಿ ಗಾರುಡೀ ವಿದ್ಯೆ ನೋಡಿ ಸಂತೋಷಪಡುವವರಿಗೆ ಏನು ಹೇಳ ಬೇಕು?" ಎಂದನು.

ಕಾವಲುಗಾರರ ನಾಯಕನು ಮಾಯಾಮರ್ಕಟನ ಬಳಿಗೆ ಬಂದು, ಅವನು ಒಂಟಿಗಾಲಿನಲ್ಲಿ ನಿಂತಿರುವ ಕೋಲನ್ನು ಕಡಿಯುವವನಂತೆ ಕತ್ತಿಯನ್ನು ಆಡಿಸುತ್ತ, "ಎಲೋ! ನರಮರ್ಕಟಾ, ಏನೇನೋ ಸಮಾಚಾರ ಹೇಳುವವನಂತೆ ಮಾತಾಡುವೆಯಲ್ಲಾ? ನೀನು ನಿಜಕ್ಕೂ ಶತ್ರುವಿನ ಗೂಢಚಾರಿ ಅಲ್ಲಾ ಎನ್ನುವೆಯಾ? ಯಾರೋ ಕರಡೀ ಕೆಂಗಣ್ಣು ಮಾಂತ್ರಿಕ ಅಂದೆಯಲ್ಲಾ? ಅದೆಲ್ಲಾ ನಿಜವೇನು?" ಎಂದು ಕೇಳಿದನು.

ಮಾಯಾಮರ್ಕಟನು ಮಿಂಚಿನ ವೇಗದಲ್ಲಿ ಕೆಳಕ್ಕೆ ಧುಮುಕಿ, ಕಾವಲುಗಾರರ ನಾಯಕನ ಕೈಯಲ್ಲಿದ್ದ ಕತ್ತಿಯನ್ನು ಸರಕ್ಕೆಂದು ಕಿತ್ತು, ಅದರಿಂದ ತನ್ನ ನಡುವಿಗೆ ಕಟ್ಟಿದ್ದ ಹಗ್ಗವನ್ನು ಕಡಿದು, "ಮೂರ್ಖರೇ! ನನ್ನ ಶಕ್ತಿ ಸಾಮರ್ಥ್ಯಗಳು ಎಂಥವೆಂದು ಸ್ವಲ್ಪ ಮಟ್ಟಿಗಾದರೂ ಗೊತ್ತಾಯಿತೆ? ನಿಮ್ಮ ರಾಜನನ್ನು ಈಗಲೇ ನನ್ನ ಇದಿರಿಗೆ ಕರೆದು ತನ್ನಿರಿ. ನಿಮಗೆಲ್ಲಾ ರಾಜಭಕ್ತಿಯಿದ್ದರೆ ಈಗಲೇ ನಿರೂಪಿಸಿರಿ. ಅವನು ಸ್ವಲ್ಪಕಾಲ ಸುಖವಾಗಿ ಬದುಕಿರಬೇಕೆಂದು ನನ್ನ ಆಸೆ!" ಎಂದು ಅವಸರಪಡಿಸಿದನು.

ಈಗ ಮಾತ್ರ ಎಲ್ಲರಿಗೂ ಏನೋ ಭಯ ಹುಟ್ಟಿತು. ಕಾವಲುಗಾರರ ನಾಯಕನೂ ಹೆದರಿ ಮರ್ಕಟನನ್ನೇ ಬೆದರು ಕಣ್ಣುಗಳಿಂದ ನೋಡುತ್ತ ಬಾಯಿ ಮುಚ್ಚಿ ನಿಂತನು.

ಮಾಯಾಮರ್ಕಟನು ಕತ್ತಿ ಝಳಪಿಸುತ್ತ ಅವನ ಬಳಿಗೆ ಬಂದು, "ಏನೋಯ್ ಮಂದಮತೀ! ಬೆಪ್ಪನ ಹಾಗೆ ನಿಂತಿದ್ದಿ? ನನ್ನ ಆಜ್ಞೆ ಕೇಳಲಿಲ್ಲವೇ?" ಎಂದನು.

ಕಾವಲುಗಾರರ ನಾಯಕನು ಹೆದರಿ ನಡುಗುತ್ತ, "ಮಹಾರಾಜರು ತುಂಬಿದ ಸಭೆಯಲ್ಲಿರುವಾಗ ಅವರನ್ನು ಇಲ್ಲಿಗೆ ಬರುವಂತೆ ನಾನು ಕರೆದರೆ, ಮೊದಲು ನನ್ನ ತಲೆ ಹಾರುತ್ತದೆ" ಎಂದನು.



"ಹಾಗಾದರೆ ಬಿಡು, ನಾನೇ ಅಲ್ಲಿಗೆ ಹೋಗುತ್ತೇನೆ, ದಾರಿ ತೋರಿಸಿ ಮುಂದೆ ನಡೆ" ಎಂದ ಮಾಯಾಮರ್ಕಟ.

ಕಾವಲುಗಾರರ ನಾಯಕನು ಮೆಟ್ಟಲೇರಿ ರಾಜಭವನದೊಳಗೆ ನಡೆದನು. ಅವನ ಹಿಂದೆಯೇ ಮರ್ಕಟನೂ ಸಾಗಿದನು. ಜನರು ಹಿಂದೆಯೇ ಹೋಗಲು ಧೈರ್ಯವಿಲ್ಲದೆ, ಇದ್ದಲ್ಲೇ ಮೌನಮುದ್ರೆಯಿಂದ ಸುಮ್ಮನೇ ನಿಂತರು.

ಜಿತಕೇತು ರಾಜನು ಸಿಂಹಾಸನದಲ್ಲಿ ಕುಳಿತುಕೊಂಡು ಸಭೆಯಲ್ಲಿರುವ ಪುರಪ್ರಮುಖರೊಂದಿಗೆ ಏನೋ ಮಾತಾಡಿಕೊಂಡಿದ್ದನು. ಆ ಸಮಯದಲ್ಲಿ ಹಠಾತ್ತಾಗಿ ಕಾವಲುಗಾರರ ನಾಯಕನು ಸಭೆಯೊಳಗೆ ಹೊಕ್ಕು, "ಮಹಾಪ್ರಭುಗಳು ಕ್ಷಮಿಸಬೇಕು. ನನ್ನ ಹಿಂದೆ ಮರ್ಕಟ ರೂಪದಲ್ಲಿ, ಕತ್ತಿ ಹಿಡಿದುಕೊಂಡು ಬರುವವನು ಮಹಾಶಕ್ತಿವಂತನು. ನಮ್ಮ ರಾಜ್ಯದ ಮೇಲೆ ಬರುವ ಬಲುದೊಡ್ಡ ಅಪಾಯವನು



ಕುರಿತು ಅವಸರವಾಗಿ ತಮ್ಮ ಮುಂದೆ ಹೇಳಿ ಎಚ್ಚರಿಸಬೇಕಂತೆ. ಅದಕ್ಕೇ ಅಪ್ಪಣೆ ಇಲ್ಲದೆ ಬರ ಬೇಕಾಯಿತು." ಎಂದು ಹೇಳಿ ಬದಿಗೆ ಸರಿದನು.

ಜಿತಕೇತು ರಾಜನೂ, ಸಭೆಯಲ್ಲಿದ್ದವರೂ ಮಾಯಾ ಮರ್ಕಟನನ್ನು ನೋಡಿ ಮೊದಲು ಆಶ್ಚರ್ಯಪಟ್ಟರು. ಆತನ ವಿಚಿತ್ರ ರೂಪವನ್ನೂ, ಹಾವ ಭಾವಗಳನ್ನೂ ನೋಡಿ ಕೆಲವರ ಮುಖದಲ್ಲಿ ನಗುವಿನ ರೇಖೆಗಳೆದ್ದುವು.

ಜಿತಕೇತು ರಾಜನು ಸಿಂಹಾಸನದ ಅಕ್ಕಪಕ್ಕಗಳಲ್ಲಿ ನಿಂತಿದ್ದ ಇಬ್ಬರು ಮಂತ್ರಿಗಳನ್ನು ನೋಡಿ, "ಬಂದವ ನನ್ನು ನೋಡುವುದೇ ಒಂದು ಸಂತೋಷವಾಗಿದೆ ಅಲ್ಲವೇ ? ಪ್ರಧಾನಮಂತ್ರಿ ಜೀವಗುಪ್ತನು ಸಮ ಯಕ್ಕೆ ಇಲ್ಲದೆ ಹೋದನು. ಅವನು ಈ ಪ್ರಾಣಿ ಯನ್ನು ನೋಡಿ ಎಷ್ಟು ಸಂತೋಷಪಡುತ್ತಿದ್ದನೋ!" ಎಂದನು. ಅಷ್ಟರಲ್ಲಿ ಏನೋ ಆಲೋಚನೆ ಬಂದವ ನಂತೆ, ಮುಖವನ್ನು ಗಂಭೀರವಾಗಿ ಮಾಡಿಕೊಂಡು, ಕಾವಲುಗಾರರ ನಾಯಕನನ್ನು ನೋಡುತ್ತ, "ಅಂಜು ಕುಳಿ ಭಡವಾ! ಒಂದು ಆಟದ ಕೋತಿಯನ್ನು ನೋಡಿ, ಮಹಾ ದ್ವಾರವನ್ನು ತೆರೆದಿಟ್ಟು ಇದನ್ನು ಸ್ವಯಂ ಇಲ್ಲಿಗೆ ಕರೆದು ತಂದ ನೀನು, ನಿಜಕ್ಕೂ ಶತ್ರು ಸೈನಿಕರು ದ್ವಾರದ ಹತ್ತಿರ ಬಂದರೆ ಏನು ಗತಿಯಾದೀತೆಂದು ಆಲೋಚಿಸಿದೆಯಾ ? ನಿನಗೆ ಶಿರಚ್ಛೇದ ಶಿಕ್ಷೆಯನ್ನೇ ಕೊಡಬೇಕಾಗಿದೆ. ನಮ್ಮ ಕಟುಕರನಾಯಕ ಬಂದ ಕೂಡಲೇ ನಿನ್ನ ಶಿಕ್ಷೆ ಅಮಲಾಗುತ್ತದೆ." ಎಂದು ಅವನನ್ನು ಎಳೆದೊಯ್ಯು ವಂತೆ ಭಟರ ಕಡೆಗೆ ನೋಡಿದನು.

ಈ ಶಿಕ್ಷೆಯ ಮಾತನ್ನು ಕೇಳಿದ ಕೂಡಲೇ ಸಭೆಯವರೆಲ್ಲ "ಶಭಾಸ್! ಸರಿಯಾದ ದಂಡನೆ!" ಎನ್ನುತ್ತ ಆನಂದೋತ್ಸಾಹದಿಂದ ಚಪ್ಪಾಳೆ ತಟ್ಟಿದರು. ಅದುವರೆಗೂ ರಾಜನ ಕಡೆಗೂ, ಸಭಾಸದರ ಕಡೆಗೂ ನೋಡುತ್ತಾ ಇದ್ದ ಮಾಯಾಮರ್ಕಟನು, "ಜೈ ತಾಂತ್ರಿಕ ಗುರೋ!" ಎಂದು ಕೂಗಿದನು. ಮರು ಕ್ಷಣದಲ್ಲಿ ಇಡೀ ಸಭೆ ಸ್ತಬ್ಧವಾಯಿತು. ಮಾಯಾ ಮರ್ಕಟನು ಕರ್ಕಶ ಕಂಠದಿಂದ, "ಎಲೈ ಜಿತಕೇತು ಮಹಾರಾಜಾ, ಏನೂ ತಿಳಿಯದೆ ಆನಂದಪಡು ತ್ತಿರುವ ನಗರ ಪ್ರಮುಖರೇ! ನಿಮ್ಮ ಮನಸ್ಸನ್ನು ಸ್ವಲ್ಪ ಸ್ವಾಧೀನದಲ್ಲಿಟ್ಟುಕೊಂಡು ನಾನು ಹೇಳುವ ಮಾತನ್ನು ಕೇಳಿರಿ. ನನ್ನನ್ನು ಮಾಮೂಲು ಕೋತಿ ಎಂದು ತಿಳಿಯಬೇಡಿ. ನಾನು ಮಹಾ ತಾಂತ್ರಿಕವೇತ್ತರ ಪ್ರಧಾನ ಶಿಷ್ಯನಾದ ಭ್ರಾಂತಿಮತಿ ಎಂಬವನು. ಈಗ ನಿಮ್ಮ ನಗರದ ಮೇಲೆ ಕಾಳೀವರ್ಮನೆಂಬ ಮಹಾ ಶೂರನೂ, ಕರಡಿಕೆಂಗಣ್ಣನೆಂಬ ಮಹಾ ಮಾಂತ್ರಿಕನೂ ದಾಳಿ ಬೀಳಲು ಬರುತ್ತಿದ್ದಾರೆ. ನಿಮಗೆ ಆ ವಿಷಯವನ್ನು ಮುಂದಾಗಿ ಹೇಳಿ ಎಚ್ಚರಿಸಲೆಂದೇ ನಾನು ಬಂದಿದ್ದೇನೆ. ಅದು ತಿಳಿಯದೆ ನಿಮ್ಮ ಭಟರು ನನ್ನನ್ನು ಎಷ್ಟೆಲ್ಲಾ ಅವಮಾನಪಡಿಸಿದರು ಗೊತ್ತಾ?" ಎಂದು ಹೇಳಿ ಎಲ್ಲರನ್ನೂ ತಿರಸ್ಕಾರ ದಿಂದ ನೋಡಿದನು.

ಮಾಯಾಮರ್ಕಟನ ಮಾತು ಕೇಳಿ ಸಭೆಯಲ್ಲಿ ಒಂದು ಬಗೆಯ ಗೊಣಗೊಣವೆದ್ದಿತು. ರಾಜನು ಬೆರಗಾಗಿ, ಸಿಂಹಾಸನದಿಂದ ಎದ್ದು ನಿಂತು ಮಾಯಾಮರ್ಕಟನನ್ನು ನೋಡಿ, "ಅದಕ್ಕೆ ಕಾರಣ ನಿನ್ನ ಈ ಕೋಪವೇ. ಆದರೆ ನಿನ್ನ ಮಾತಿನ ರೀತಿಯನ್ನು ನೋಡಿದರೆ ನಿನ್ನ ರೂಪಕ್ಕೆ ತಕ್ಕಹಾಗಿಲ್ಲ. ಆದುದರಿಂದ ನೀನು ಮಾಮೂಲು ಕೋತಿ ಅಲ್ಲವೆಂಬುದು ನಿಜವೇ. ನೀನು ಹೇಳಿದ ಎಚ್ಚರಿಕೆಯಲ್ಲಿ ಕಾಳೀವರ್ಮ ಎಂಬ ಹೆಸರಿರುವುದನ್ನು ನೋಡಿ ಆಶ್ಚರ್ಯವಾಗಿದೆ. ನಮ್ಮ ಮುಂದೆ ಅಪರಾಧಿಯಾದ ಆ ಕಾಳೀವರ್ಮನೊಂದಿಗೆ ಅವನ ಮಿತ್ರರೆಲ್ಲರನ್ನೂ ಹಿಡಿದು ಬಂಧಿಸಿ ತರಬೇಕೆಂದು, ನಮ್ಮ ಪ್ರಧಾನ ಮಂತ್ರಿ ಜೀವಗುಪ್ತನನ್ನು ಕೆಲಮಂದಿ ಸೈನಿಕರನ್ನು ಜತೆಗೆ ಕೊಟ್ಟು ಕಳುಹಿಸಿದ್ದೇನೆ. ಹಾಗಾದರೆ ಅವರೆಲ್ಲಾ ಏನಾದರು?" ಎಂದನು.

ರಾಜನ ಪ್ರಶ್ನೆಗೆ ಮರ್ಕಟನು ಒಮ್ಮೆ ಕೀಚ್ಚೆಂದು ನಗುವನ್ನು ಹಾರಿಸಿ, "ಈಗ ಮಹಾರಾಜನ ತಲೆಗೆ ನನ್ನ ಮಾತಿನ ಅರ್ಥ ಏರಿತು. ನಿಮ್ಮ ಆ ಗುಂಪನ್ನೆಲ್ಲಾ ಕಾಳೀವರ್ಮನು ತನ್ನ ಕತ್ತಿಯಿಂದ, ಕರಡಿಕೆಂಗಣ್ಣ ಮಾಂತ್ರಿಕನು ತನ್ನ ಮಂತ್ರದಂಡದಿಂದ...ಅಂದಹಾಗೆ ಎಲ್ಲಿ ನನ್ನ ಮಂತ್ರದಂಡ?" ಎಂದು ಹೆದರಿದವನಂತೆ ಸುತ್ತಲೂ ನೋಡಿ ಕಾವಲುಗಾರರ ಮುಖ್ಯಸ್ಥನ ಬಳಿಗೆ ಹಾರಿ, "ನೀನು ತಾನೇ ನನ್ನನ್ನು ಅಟಕಾಯಿಸಿ ಇಲ್ಲಿಗೆ ಕರೆದು ತಂದೆ? ಎಲ್ಲಿ ಹೋಯಿತು ನನ್ನ ಕೈಯಲ್ಲಿದ್ದ ಮಂತ್ರದಂಡ?" ಎಂದು ಅವನ ಕುತ್ತಿಗೆ ಹಿಡಿದನು.

ಕಾವಲಿನ ನಾಯಕನು ಮರ್ಕಟನ ಹಿಡಿತದಿಂದ ಬಿಡಿಸಿಕೊಳ್ಳಲು ಒದರಾಡುತ್ತ "ಮರ್ಕಟಪ್ರಭೋ! ಮಂತ್ರದಂಡದ ಸಂಗತಿ ನನಗೇನು ಗೊತ್ತು? ನಾನರಿಯೆನಲ್ಲಾ! ಮಹಾಪ್ರಭೂ! ಜೀವದಾನ! ಜೀವದಾನ! ನನ್ನ ಪ್ರಾಣ ರಕ್ಷಿಸಿರಿ!" ಎಂದು ಮೊರೆಯಿಡ ತೊಡಗಿದನು.



ಆಗ ಸಭೆಯಲ್ಲಿದ್ದವರಲ್ಲಿ ಇಬ್ಬರು ಧೈರ್ಯಶಾಲಿಗಳಾದ ಬಲಶಾಲಿಗಳು ತಟ್ಟನೆ ಹೋಗಿ, ಮಾಯಾಮರ್ಕಟನ ಕೈಗಳನ್ನೂ ನಡುವನ್ನೂ ಹಿಡಿದು ಈಚೆಗೆ ಎಳೆದು, "ರಾಜ್ಯದಲ್ಲಿ ಮನುಷ್ಯರ ಪ್ರಾಣ ತೆಗೆಯುವ ಹಕ್ಕು ನಮ್ಮ ಮಹಾರಾಜರೊಬ್ಬರಿಗೇ ಇದೆ. ಅವರ ಮುಂದೆ ನೀನು ಹೀಗೆ ಅವಸರಪಡುವುದು ಕಾನೂನಿಗೆ ವಿರೋಧ" ಎಂದರು.

ಮಾಯಾಮರ್ಕಟನು ಕೋಪದಿಂದ ಕರಕರನೆ ಹಲ್ಲು ಕಡಿದು, "ಜಿತಕೇತು ಮಹಾರಾಜಾ, ಕಿವಿಗೊಟ್ಟು ಕೇಳು! ಸಂಗತಿಯನ್ನು ಎರಡೇ ಮಾತಿನಲ್ಲಿ ಹೇಳುತ್ತೇನೆ. ನೀನು ಇಲ್ಲಿ ನಗರ ದ್ವಾರಗಳನ್ನು ಹಾಕಿಕೊಂಡು, ಸಭೆಯಲ್ಲಿ ಒಡ್ಡೋಲಗ ನಡೆಸುತ್ತಾ ವಿನೋದ ಹರಟೆಗಳಲ್ಲಿ ಕಾಲಕ್ಷೇಪ ಮಾಡುತ್ತಿರುವೆ. ಆ ಕಾರಣದಿಂದ ನಗರದ ಹೊರಗೆ ಏನೇನು ನಡೆಯುವುದೆಂದು ನಿನಗೆ ಗೊತ್ತಾಗುವುದಿಲ್ಲ. ನಿನ್ನ ಕಟುಕರ ನಾಯಕ ಈಗ ಕರಡಿ ರೂಪದಲ್ಲಿದ್ದಾ



ನೆಂಬುದು ಗೊತ್ತೇ ? ಅವನೂ, ಕಾಳೀವರ್ಮನೂ, ಕರಡಿಕೆಂಗಣ್ಣ ಮಾಂತ್ರಿಕನೂ ಒಂದಾಗಿದ್ದಾರೆಂಬು ದನ್ನು ಬಲ್ಲೆಯಾ ? ಅವರು ಒಬ್ಬ ರಾಕ್ಷಸನನ್ನೂ ಕರೆದುಕೊಡು ಈ ನಗರದ ಮೇಲೆ ದಾಳಿ ಮಾಡಲು ಬರುತ್ತಿದ್ದಾರೆಂದು ಈಗಾದರೂ ತಿಳಿದು ತಕ್ಕ ಬಂದೋಬಸ್ತು ಮಾಡು. ಸಾಧ್ಯವಾದಷ್ಟು ಬೇಗನೇ ಮಾಡು." ಎಂದನು.

ರಾಕ್ಷಸನ ಹೆಸರು ಕೇಳಿದ ಕೂಡಲೇ ಜಿತಕೇತು ರಾಜನು ಅದುರಿಬಿದ್ದು, "ರಾಕ್ಷಸನೇ ? ಅಂಥವರು ನಿಜಕ್ಕೂ ಇದ್ದಾರೇನು ? ಎಲ್ಲಿಯೋ ಕಥೆಯಲ್ಲಿ ಕೇಳಿದ್ದೇನೆಯೇ ಹೊರತು ಈ ಕ್ಷಣದವರೆಗೂ ಕಣ್ಣೆದಿರು ಕಂಡಿಲ್ಲವಲ್ಲ !" ಎಂದನು.

ಮಾಯಾಮರ್ಕಟನು ವಿಕಟವಾಗಿ ನಗುತ್ತ, "ಕಣ್ಣಾರೆ ನೋಡಬೇಕೆಂಬ ನಿನ್ನ ಕೋರಿಕೆ ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ತೀರಿಹೋಗುತ್ತದೆ. ಆದರೆ ಆ ಭಯಂಕರ ರಾಕ್ಷಸನನ್ನು ನೋಡಿದ ಮೇಲೆ, ನೋಡಿದೆನೆಂಬ ತೃಪ್ತಿಯನ್ನು ನೀನು ಅನುಭವಿಸುವುದು ಸತ್ತ ಮೇಲೆಯೇ ! ನೋಡಿದ ಮೇಲೆ ಒಂದೆರಡು ಕ್ಷಣ ಬದುಕಿದ್ದರೆ ಹೆಚ್ಚು !" ಎಂದನು.

ಜಿತಕೇತು ರಾಜನ ಮಂತ್ರಿಗಳಿಬ್ಬರೂ ಭೀತಿಯಿಂದ ನಡುಗುತ್ತ ಮುಖಮುಖ ನೋಡಿಕೊಂಡು. "ಮಹಾರಾಜರೇ ! ನಾವು ಈ ಅಪಾಯದಿಂದ ಪಾರಾಗುವ ಬಗೆ ಹೇಗೆ ? ಆದಷ್ಟು ಬೇಗ ಆಲೋಚಿಸ ಬೇಕಾಗಿದೆಯಲ್ಲ !" ಎಂದರು.

"ಇದು ರಾಜನಾದ ನಾನು ಮಂತ್ರಿಗಳಾದ ನಿಮ್ಮನ್ನು ಕೇಳಬೇಕಾದ ಪ್ರಶ್ನೆ. ನೀವು ಅತಿಕ್ರಮಿಸಿ ನನ್ನನ್ನೇ ಕೇಳಿದ್ದರಿಂದ ಈಗಲೇ ನಿಮ್ಮನ್ನು ಉದ್ಯೋಗ ದಿಂದ ತೊಲಗಿಸಿದ್ದೇನೆ. ಪ್ರಧಾನಮಂತ್ರಿ ಜೀವಗುಪ್ತ ನಿರುತ್ತಿದ್ದರೆ ತಕ್ಕ ಮಂತ್ರಾಲೋಚನೆ ಮಾಡಿ ಬರ ಲಿರುವ ಆಪತ್ತಿನಿಂದ ಎಲ್ಲರನ್ನೂ ಕಾಪಾಡುತ್ತಿದ್ದ." ಎಂದು ಹೇಳಿ ಜಿತಕೇತುರಾಜನು ಸಿಂಹಾಸನದ ಕಡೆ ಯಿಂದ ಕದಲಿ ಮಾಯಾಮರ್ಕಟನ ಬಳಿಗೆ ಬರುತ್ತ, ಸಭಿಕರನ್ನು ನೋಡಿ, "ಸುದ್ದಿ ಕೇಳಿದಿರಷ್ಟೆ ? ನಮ್ಮ ನಗರದ ಮೇಲೆ ಮಾಂತ್ರಿಕನೂ ರಾಕ್ಷಸನೂ ಹೋರಾಟಕ್ಕೆ ಬರುತ್ತಿದ್ದಾರೆ. ಈಗ ಏನು ಮಾಡಿದರೆ ಚೆನ್ನಾಗಿರುತ್ತದೆ ? ನಿಮಗೇನಾದರೂ ಉಪಾಯ ತೋರಿದರೆ ಹೇಳಿರಿ" ಎಂದನು.

ಸಭೆಯವರಾರೂ ಉತ್ತರ ಕೊಡಲಿಲ್ಲ. ಪ್ರತಿ ಯೊಬ್ಬರ ಮನಸ್ಸಿನಲ್ಲಿಯೂ ರಾಕ್ಷಸನ ಆಕಾರವೂ, ತಾವೂ ತಮ್ಮ ಹೆಂಡಿರು ಮಕ್ಕಳೂ ಅವನಿಗೆ ಆಹಾರ ವಾಗುವ ಘೋರ ಚಿತ್ರಗಳೂ, ಮೂಡ ತೊಡ ಗಿದ್ದುವು. ಆ ರಾಕ್ಷಸನು ನಗರದೊಳಗೆ ಪ್ರವೇಶಿಸುವು ಗಕ್ಕೆ ಮೊದಲೇ ತಮ್ಮ ಮನೆಯೊಳಗಿದ್ದ ಪ್ರಿಯ ರಾದವರನ್ನೂ, ಧನವನ್ನೂ, ಮುಖ್ಯ ವಸ್ತುಗಳನ್ನೂ ತೆಗೆದುಕೊಂಡು ಓಡಿಹೋಗುವುದು ಹೇಗೆಂದು ಲೆಕ್ಕ ಹಾಕಿಕೊಂಡಿದ್ದರು. ರಾಕ್ಷಸನು ಬಂದುಬಿಟ್ಟರೆ ರಾಜನು ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ!



ಜಿತಕೇತುರಾಜನು ಸಭಿಕರಿಂದ ಯಾವ ಪ್ರತ್ಯುತ್ತರವೂ ಬಾರದಿರುವುದನ್ನು ನೋಡಿ, ಭಯಕಂಪಿತರಾಗಿ ಏನೂ ಹೇಳದಿರುವರೆಂದು ತಿಳಿದು, ಮಾಯಾಮರ್ಕಟನ ಬಳಿಗೆ ಹೋಗಿ, "ರೂಪದಲ್ಲಿ ನೀನು ಮರ್ಕಟದ ಹಾಗಿದ್ದರೂ ಮಂತ್ರಾಲೋಚನೆಯಲ್ಲಿ ನನ್ನ ಪ್ರಧಾನಮಂತ್ರಿ ಜೀವಗುಪ್ತನಿಗೆ ಸಾಟಿಯಾಗುವ ಹಾಗಿರುವೆ. ನೀನು ಹೇಳುವುದನ್ನು ನೋಡಿದರೆ ಆ ಮಂತ್ರಿಯನ್ನು ರಾಕ್ಷಸನು ಹೊಟ್ಟೆಗೆ ಸೇರಿಸಿಕೊಂಡಿರಬೇಕು. ಆದ್ದರಿಂದ ಈಗ ನಿನ್ನನ್ನೇ ನನ್ನ ಪ್ರಧಾನಮಂತ್ರಿಯಾಗಿ ನಿಯಮಿಸುತ್ತೇನೆ. ಶತ್ರುಸಂಹಾರಕ್ಕೂ, ರಾಜ್ಯ ವಿಸ್ತರಣೆಗೂ ತಕ್ಕುದಾದ ಒಂದು ಒಳ್ಳೆಯ ಪಥಕವನ್ನು ತತ್‌ಕ್ಷಣವೇ ಆಲೋಚಿಸಿ ಅಮಲು ಮಾಡಿಬಿಡು. ನಿನಗೆ ಪೂರ್ಣ ಅಧಿಕಾರ ಕೊಟ್ಟಿದ್ದೇನೆ. ಏಕೆಂದರೆ, ನೀನು ನಮ್ಮ ಹಿತಚಿಂತನೆಯಿಂದಲೇ ಮುಂದಾಗಿ ಬಂದು, ಈ ಸುದ್ದಿ ನಮಗೆ ತಿಳಿಸಿದೆ!" ಎಂದು ಮರ್ಕಟನ ಕೈ ಹಿಡಿದು ಸಿಂಹಾಸನದ ಬಳಿಗೆ ನಡೆಯಿಸಿಕೊಂಡು ಹೋದನು.

ಅದನ್ನು ನೋಡಿ ಇಡೀ ಸಭೆಯೇ ಜೀವಬಂದಂತೆ ಕರತಾಡನ ಧ್ವನಿಯನ್ನು ಎಬ್ಬಿಸಿತು. ಮಾಯಾಮರ್ಕಟನು ಅಭಯ ದಾನ ಮಾಡುವವನ ಹಾಗೆ, ಕತ್ತಿಯನ್ನು ಬಾಯಿಯಲ್ಲಿ ಹಿಡಿದುಕೊಂಡು, ಎರಡು ಕೈಗಳನ್ನೂ ಮೇಲೆತ್ತಿ ಆಡಿಸಿದನು. ಆ ಮೇಲೆ ಕತ್ತಿಯನ್ನು ಬಾಯಿಯಲ್ಲಿ ಇಟ್ಟುಕೊಂಡೇ ಏನೋ ಹೇಳಲು ಹೋದಾಗ ಕತ್ತಿ ಝಣಾಲ್ಲೆಂದು ಕೆಳಗೆ ಬಿತ್ತು. ಕೂಡಲೇ ಮಾಯಾಮರ್ಕಟನು ತಲೆಯನ್ನು ಬಗ್ಗಿಸದೆ, ಬಾಲದಿಂದಲೇ ಬಿದ್ದ ಕತ್ತಿಯನ್ನು ಸುತ್ತಿ ಹಿಡಿದು, ಮೇಲಕ್ಕೆತ್ತಿ ನಿಲ್ಲಿಸಿಕೊಂಡು, "ಜೈ, ತಾಂತ್ರಿಕ ಗುರೋ!" ಎಂದನು. ಅದೇ ಹೊತ್ತಿನಲ್ಲಿ ಸಭಾ ದ್ವಾರದ ಹತ್ತಿರ ಏನೋ ಕಲಕಲರವ ಎದ್ದಿತು. ರಾಜನೂ ಸಭಾಸದರೂ ಆ ಕಡೆಗೆ ದೃಷ್ಟಿ ಹರಿಸಿದರು.

ಮಂತ್ರಿ ಜೀವಗುಪ್ತನು ಹರಿದುಹೋದ ದುಸ್ತುಗಳಿಂದ, ಶಿರಸ್ತ್ರಾಣವಿಲ್ಲದೆ ಕೆದರಿದ ತಲೆಯಿಂದ, ಉಸಿರು ಬಿಡುತ್ತ ಸಭೆಯೊಳಗೆ ಪ್ರವೇಶಿಸಿದನು. ಅವನ ಹಿಂದೆ ಸಾಮಂತ ಸೂರ್ಯಭೂಪತಿಯೂ, ಇಬ್ಬರು ಸೈನಿಕರೂ ಸಹ ಇದ್ದರು. ಆ ಸ್ಥಿತಿಯಲ್ಲಿ ಜೀವಗುಪ್ತನನ್ನು ನೋಡಿ ಸಭಿಕರು, "ನಮ್ಮ ಪ್ರಧಾನಮಂತ್ರಿಗಳೂ ಸಜೀವರಾಗಿದ್ದಾರೆ! ರಾಕ್ಷಸನಿಗೆ ಮೋಸ ಕೊಟ್ಟು ಹೇಗೋ ಪಾರಾಗಿ ಬಂದಿದ್ದಾರೆ!" ಸುಸ್ವಾಗತ! ಸುಸ್ವಾಗತ!" ಎನ್ನುತ್ತ ಉತ್ಸಾಹದಿಂದ ಕೇಕೇ ಹಾಕಿದ್ದುದಿತು.

ಮಾ[illegible]ಟನು ಕೋಪದಿಂದ ಕತ್ತಿಯನ್ನು ಎತ್ತಿ ಕುಣಿಸುತ್ತ, "ಎಲೋ ಮಹಾ ಮೂರ್ಖರಾದ ನಗರ ಪ್ರಮುಖರೇ! ಈಗ ತಾನೇ ನಿಮ್ಮ ರಾಜನು ನನ್ನನ್ನು ಪ್ರಧಾನಮಂತ್ರಿಯಾಗಿ ನಿಯಮಿಸಿದ್ದು? ಮರೆತಿರೇನು? ನನಗೆ ಜಯಕಾರ ಮಾಡುವುದನ್ನು ಬಿಟ್ಟು ಅರೆ ಜೀವನಾಗಿ ಬಂದವನನ್ನು ನೋಡಿ

ಕೇಕೇ ಹಾಕುವಿರೇನು?" ಎಂದು ಹೇಳಿ ಜಿತಕೇತು ವನ್ನು ನೋಡಿ, "ರಾಜಾ, ಇದಕ್ಕೆ ನೀನೇನು ಹೇಳುವಿ? ಇಲ್ಲಿ ಈಗ ಪ್ರಧಾನ ಮಂತ್ರಿಯಾಗಿರುವವನು ನಾನೋ. ಅಲ್ಲ ಶತ್ರುವಿಗೆ ಬೆನ್ನು ತೋರಿಸಿ ಲಜ್ಜೆಯಿಲ್ಲದೆ ಓಡಿ ಬಂದ ಈ ಜೀವಗುಪ್ತನೋ? ಬೇಗ ನಿರ್ಣಯಮಾಡಿ ಹೇಳಿಬಿಡು." ಎಂದು ಕೇಳಿದನು.

"ಈ ಮರ್ಕಟ ಮಹಾನುಭಾವನೇ ನಮ್ಮ ರಾಜ್ಯದ ಪ್ರಧಾನಮಂತ್ರಿ. ಈ ಮಾತು ಬೇಕಾದರೆ ಇನ್ನೊಂದು ಸಾರಿ ಹೇಳುತ್ತೇನೆ. ಜೀವಗುಪ್ತನು ಈ ಕ್ಷಣದಿಂದ ನಗರದ ಒಬ್ಬ ಸಾಮಾನ್ಯ ಪ್ರಜೆ. ಇದಕ್ಕೇನೂ ಸಂದೇಹವಿಲ್ಲ" ಎಂದನು ಜಿತಕೇತು ಮಹಾರಾಜ.

ಈ ಮಾತು ಕೇಳಿ ಮಂತ್ರಿ ಜೀವಗುಪ್ತನು ಕೋಪದಿಂದ, ಏನು ಬಂದರೂ ಸಿದ್ಧನಾಗುವವನಂತೆ, ಕತ್ತಿ ಹಿರಿದು ಮಾಯಾಮರ್ಕಟನನ್ನು ಕೆಂಗಣ್ಣಿನಿಂದ ನೋಡುತ್ತ "ಈ ಮುಬ್ಬು ಕೋತಿ ಭಂಡ ಚಂದ್ರಶಿಲಾ ನಗರದ ಪ್ರಧಾನಮಂತ್ರಿಯೇ? ಇವನನ್ನು ರಾಕ್ಷಸನ ಕಲ್ಲಿನ ಗದೆಯ ಏಟಿನಿಂದ ಕಾಪಾಡಿದವನು. ನಾನು. ಅಂಥವನು ನನ್ನ ಮುಂದೆಯೇ ನನ್ನನ್ನು ಹೀಯಾಳಿಸಿ ಮಾತಾಡುವುದನ್ನು ನಾನೆಂದಿಗೂ ಸಹಿಸಲಾರೆ! ಈಗ ನಾನೇ ಕೈಯಾರೆ ಇವನ ಹುಚ್ಚು ಕೋತಿ ತಲೆಯನ್ನು ಹಾರಿಸಿಬಿಡುತ್ತೇನೆ!" ಎಂದು ಗರ್ಜಿಸುತ್ತ ಮರ್ಕಟನ ಕಡೆಗೆ ಧಾವಿಸಿ ಬಂದನು.

ಜಿತಕೇತು ರಾಜನು "ನಿಲ್ಲು ಜೀವಗುಪ್ತಾ! ಇವನು ಮಾಮೂಲು ಮರ್ಕಟನಲ್ಲ. ಭ್ರಾಂತಿಮತಿ ಎಂಬ ಮಹಾತಾಂತ್ರಿಕ. ಅವನ ಗೊಡವೆಗೆ ಬಂದರೆ ನಿನಗೆ ಮರಣ ದಂಡನೆ!" ಎಂದನು ಕೋಪದಿಂದ.

ಆ ರಾಜನ ಮಾತನ್ನು ಜೀವಗುಪ್ತನು ಲಕ್ಷ್ಯ ಮಾಡದೆ, "ಇವನಾರೆಂದು ನಿಮಗಿಂತಲೂ ಹೆಚ್ಚಾಗಿ ನನಗೊಗ್ಗಿತ್ತು, ಈ ತಾಂತ್ರಿಕ ಮಂಗ ಕದ್ದುಕೊಂಡು ಬಂದ ಕರಡಿಕೆಂಗಣ್ಣನ ಮಂತ್ರದಂಡ ಎಲ್ಲಿದೆ? ಅದಿಲ್ಲದ ಮೇಲೆ ಇವನು ಸಾಧಾರಣ ಮರಕೋತಿಗಿಂತಲೂ ನಿಸ್ಸಹಾಯನೇ! ನೀಚಬುದ್ಧಿಯವನು! ಇವನ ತಲೆಯನ್ನೂ ಬಾಲವನ್ನೂ ನಾನೇ ಕಡಿಯುತ್ತೇನೆ. ನನ್ನ ತಲೆ ಹೋದರೂ ಚಿಂತಿಲ್ಲ!" ಎಂದು ಮರ್ಕಟನ ಮೇಲೆ ಎಗರಿದನು.

ಮಾಯಾಮರ್ಕಟನು, "ಜೈ ತಾಂತ್ರಿಕ ಗುರೋ!" ಎನ್ನುತ್ತ ಬಾಲವನ್ನು ಮಿಂಚಿನಂತೆ ತಿರುಗಿಸಿ ಜೀವಗುಪ್ತನ ಕೈಯಲ್ಲಿದ್ದ ಕತ್ತಿಯನ್ನು ಬಾಲದಿಂದಲೇ ಎಳೆದೆತ್ತಿ, ಇನ್ನೊಂದು ಕೈಯಲ್ಲಿದ್ದ ಕತ್ತಿಯನ್ನೂ ಮೇಲೆತ್ತಿ ಅಟ್ಟಹಾಸ ಮಾಡಿದನು. ಇಡಿಯ ಸಭೆಯೇ ದಂಗುಬಡೆದಂತಿತ್ತು. —(ಇನ್ನು ಇದೆ)

